KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮಾರ್ಚ್ ೧೯, ೨೦೦೯ (ಫಾಲ್ಗುಣ ೨೮, ಶಕ ವರ್ಷ ೧೯೩೦) | ಸಂಚಿಕೆ ೧೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ವಿಷಯ:** 2005 ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್‌ಡಿ 2006, ದಿನಾಂಕ: 22–06–2006.
2) ಸರ್ಕಾರದ ಅಧಿಕೃತ ಜ್ಞಾಪನ ಸಂ: ಆರ್‌ಡಿ 135 ಎಎಸ್‌ಡಿ 2006, ದಿನಾಂಕ: 25–08–2006.
3) ಸರ್ಕಾರದ ಪತ್ರ ಸಂ: ಕಂಇ 292 ಎಎಸ್‌ಡಿ 2008, ದಿನಾಂಕ: 24–07–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 22–06–2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 40 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 40 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 40 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 25–08–2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಅದರಂತೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ/ ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 6 ಪರಿವೀಕ್ಷಣಾ ತಹಶೀಲ್ದಾರರುಗಳು (ಶ್ರೀ ಹೆಚ್.ಡಿ.ಲೋಕೇಶ್, ಕು: ರೂಪಾ.ಐ.ಪಿ, ಶ್ರೀ ಶಶಿಕುಮಾರ್.ಎನ್., ಶ್ರೀ ಹರ್ಷ.ಎಸ್.ಶೆಟ್ಟಿ, ಶ್ರೀ ನವೀನ್‌ಕುಮಾರ್‌ರಾಜು.ಎಸ್, ಶ್ರೀ ನಿರಂಜನ್. ಸಿ.ಸಿ) ಸೇವೆಯಿಂದ ಬಿಟ್ಟುಹೋಗಿರುತ್ತಾರೆ. ಇನ್ನುಳಿದ 34 ಪರಿವೀಕ್ಷಣಾ ತಹಶೀಲ್ದಾರರುಗಳ ನಿಗದಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವ ಬಗ್ಗೆ, ಜಿಲ್ಲಾ ತರಬೇತಿಯಲ್ಲಿದ್ದಾಗ, ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣೆಗಳ ಬಗ್ಗೆ ಮಾಹಿತಿಯನ್ನು ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ: 24–07–2008ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆಯಲು ಪತ್ರ ಬರೆಯಲಾಗಿತ್ತು. ಅದರಂತೆ, ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಇದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಕಾರ್ಯ ನಿರ್ವಹಿಸಿರುತ್ತಾರೆ ಎಂದು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಈ

ಕೆಳಕಂಡ 15 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 292 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ 15 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಉಳಿದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಪಡೆದು ನಂತರದಲ್ಲಿ, ಆದೇಶ ಹೊರಡಿಸಲಾಗುವುದು.

| ಕ್ರ. ಸಂ | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ನರಸಿಂಹರಾಜು.ಆರ್ | 30-06-2006 | 29-06-2008 |
| 2 | ಎನ್.ಎಸ್.ಚಿದಾನಂದ | 23-06-2006 | 22-06-2008 |
| 3 | ಅಜೀಜ್ ದೇಸಾಯಿ | 03-07-2006 | 02-07-2008 |
| 4 | ನಾಗರಾಜ್. ಹೆಚ್.ಎಲ್ | 15-07-2006 | 14-07-2008 |
| 5 | ಶಿವಾನಂದಮೂರ್ತಿ.ಬಿ.ಸಿ | 29-06-2006 | 28-06-2008 |
| 6 | ಚಂದ್ರಶೇಖರಯ್ಯ.ಹೆಚ್.ಜಿ | 23-06-2006 | 22-06-2008 |
| 7 | ವಿಜಯಕುಮಾರ್.ಎ.ಬಿ | 23-06-2006 | 22-06-2008 |
| 8 | ಸಾಜೀದ್ ಅಹ್ಮದ್ ಮುಲ್ಲಾ | 28-06-2006 | 27-06-2008 |
| 9 | ಜಯಶ್ರೀ ಶಿಂತ್ರಿ | 26-06-2006 | 25-06-2008 |
| 10 | ಕುಮಾರಸ್ವಾಮಿ.ಬಿ.ಟಿ | 24-06-2006 | 23-06-2008 |
| 11 | ಜಯ. ಹೆಚ್ | 23-06-2008 | 22-06-2008 |
| 12 | ಔದ್ರಾಮ | 26-06-2006 | 25-06-2008 |
| 13 | ದಾಕ್ಷಾಯಿಣಿ. ಕೆ | 05-07-2006 | 04-07-2008 |
| 14 | ಗೀತಾ.ಎನ್.ಆರ್ | 23-06-2006 | 22-06-2008 |
| 15 | ಪ್ರಕಾಶ್. ಟಿ.ವಿ | 23-06-2006 | 22-06-2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.66

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 1998ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂ: ಕಂಇ 08 ಎಟಿಎಸ್ 2006, ದಿನಾಂಕ: 15–04–2006.
2) ಸರ್ಕಾರದ ಅಧಿಕೃತ ಜ್ಞಾಪನ ಸಂ: ಕಂಇ 08 ಎಟಿಎಸ್ 2006, ದಿನಾಂಕ: 21–04–2006.
3) ಸರ್ಕಾರದ ಆದೇಶ ಸಂ: ಆರ್‌ಡಿ 166 ಎಎಸ್‌ಡಿ 2008, ದಿನಾಂಕ:21–08–2008. 16–10–2008, 24–11–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 15–04–2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 50 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 50 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ 50 ಪೈಕಿ 49 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 21–04–2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ(3), ದಿನಾಂಕ: 21–08–2008, 16–10–2008, 24–11–2008ರಲ್ಲಿ ಕ್ರಮವಾಗಿ 17, 14 ಹಾಗೂ 10 ಪರಿವೀಕ್ಷಣಾ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ, ಆದೇಶಿಸಲಾಗಿತ್ತು. ಮುಂದುವರೆದು, ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ)

ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯಲ್ಲಿ ಕಾರ್ಯ ನಿರ್ವಹಿಸಿರುತ್ತಾರೆ ಎಂದು ವರದಿ ಮಾಡಿರುವ ಹಿನ್ನಲೆಯಲ್ಲಿ, ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಒಟ್ಟು 05 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 166 ಎಎಸ್‌ಡಿ 2008, ಬೆಂಗಳೂರು,ದಿನಾಂಕ: 22ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ 14 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರ.ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಸತೀಶ್‌ಬಾಬು. ಹೆಚ್.ಎಸ್ | 17–04–2006 | 16–04–2008 |
| 2 | ಡಾ: ಮಧುಕೇಶ್ವರ್.ಎಸ್.ಎಸ್. | 17–04–2006 | 16–04–2008 |
| 3 | ಸುರೇಶ್.ಜಿ | 28–04–2006 | 27–04–2008 |
| 4 | ರೂಪ. ಬಿ.ಆರ್ | 20–04–2006 | 19–04–2008 |
| 5 | ಗಣಪತಿ ಕಟ್ಟಿನಕೆರೆ | 21–04–2006 | 20–04–2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.198

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 1998ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂ: ಕಂಇ 08 ಎಟಿಎಸ್ 2006, ದಿನಾಂಕ: 15–04–2006.
2) ಸರ್ಕಾರದ ಅಧಿಕೃತ ಜ್ಞಾಪನ ಸಂ: ಕಂಇ 08 ಎಟಿಎಸ್ 2006, ದಿನಾಂಕ: 21–04–2006.
3) ಸರ್ಕಾರದ ಆದೇಶ ಸಂ:ಆರ್‌ಡಿ 166 ಎಎಸ್‌ಡಿ 2008, ದಿನಾಂಕ:21–08–2008, 16–10–2008

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 15–04–2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ದಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 50 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 50 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ 50 ಪೈಕಿ 49 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 21–04–2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ(3), ದಿನಾಂಕ: 21–08–2008, ದಿನಾಂಕ:16–10–2008ರಲ್ಲಿ ಕ್ರಮವಾಗಿ 17 ಹಾಗೂ 14 ಪರಿವೀಕ್ಷಣಾ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ, ಆದೇಶಿಸಲಾಗಿತ್ತು. ಮುಂದುವರೆದು, ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯಲ್ಲಿ ಕಾರ್ಯ ನಿರ್ವಹಿಸಿರುತ್ತಾರೆ ಎಂದು ವರದಿ ಮಾಡಿರುವ ಹಿನ್ನಲೆಯಲ್ಲಿ, ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಒಟ್ಟು 10 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 166 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ 10 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಉಳಿದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಪಡೆದು ನಂತರದಲ್ಲಿ, ಆದೇಶ ಹೊರಡಿಸಲಾಗುವುದು.

| ಕ್ರ.ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಉದಯಕುಮಾರ್ ಶೆಟ್ಟಿ. ಬಿ. | 28–04–2006 | 27–04–2008 |
| 2 | ಜವರೇಗೌಡ. ಟಿ | 21–04–2006 | 20–04–2008 |
| 3 | ಜಯಮಾಧವ .ಪಿ. | 28–04–2006 | 27–04–2008 |
| 4 | ದಯಾನಂದ ಭಂಡಾರಿ | 22–04–2006 | 21–04–2008 |
| 5 | ರಾಜಪ್ಪ. ಎಂ | 17–04–2006 | 16–04–2008 |
| 6 | ರಾಜುಮೊಗವೀರ.ಕೆ | 28–04–2006 | 27–04–2008 |
| 7 | ರೇಣುಕಾಂಬ | 17–04–2006 | 16–04–2008 |
| 8 | ಕುಸುಮಕುಮಾರಿ.ಎಸ್ | 18–04–2006 | 17–04–2008 |
| 9 | ಮಂಜುನಾಥ್. ಜಿ.ಎನ್ | 17–04–2006 | 16–04–2008 |
| 10 | ಹರಿಶಿಲ್ಪ. ಜಿ.ಆರ್ | 17–04–2006 | 16–04–2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.64

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 1999ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂ: ಕಂಇ 241 ಎಎಸ್‌ಡಿ 2005(1), ದಿನಾಂಕ: 25–01–2006.

2) ಸರ್ಕಾರದ ಅಧಿಕೃತ ಜ್ಞಾಪನ ಸಂ: ಆರ್‌ಡಿ 241 ಎಎಸ್‌ಡಿ 2005, ದಿನಾಂಕ: 07–04–2006.

3) ಸರ್ಕಾರದ ಆದೇಶ ಸಂ: ಆರ್‌ಡಿ 15 ಎಎಸ್‌ಡಿ 2008, ದಿನಾಂಕ: 25–07–2008, 04–09–2008, 30–10–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 25–01–2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 78 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 78 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 78 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 07–04–2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ.(3), ದಿನಾಂಕ: 25–07–2008ರಲ್ಲಿ, ದಿನಾಂಕ: 04–09–2008ರಲ್ಲಿ ಹಾಗೂ 30–10–2008ರಲ್ಲಿ ಕ್ರಮವಾಗಿ ಒಟ್ಟು 55, 10 ಹಾಗೂ 02 ಪರಿವೀಕ್ಷಣಾ ತಹಶೀಲ್ದಾರರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿತು. ಮುಂದುವರೆದು, ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ, ಮಂಡ್ಯ ತಮ್ಮ ವ್ಯಾಪ್ತಿಯಲ್ಲಿದ್ದ ಶ್ರೀ ಬಿ.ವೆಂಕಟೇಶ್, ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರ್ ಇವರು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯಲ್ಲಿ ಕಾರ್ಯ ನಿರ್ವಹಿಸಿರುತ್ತಾರೆ ಎಂದು ವರದಿ ಮಾಡಿರುವ ಹಿನ್ನಲೆಯಲ್ಲಿ ಇವರಿಗೆ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಈ ಕೆಳಕಂಡ ಪರಿವೀಕ್ಷಣಾ ತಹಶೀಲ್ದಾರ್ ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 15 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ ಪರಿವೀಕ್ಷಣಾ ತಹಶೀಲ್ದಾರರನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರ.ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಬಿ. ವೆಂಕಟೇಶ್ | 01–02–2006 | 31–01–2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.619

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀಮತಿ ಟಿ. ರೇಖಾ, ತಹಶೀಲ್ದಾರ್, ಗ್ರೇಡ್–2 ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂ: ಕಂಇ 08 ಎಟಿಎಸ್ 2006, ದಿನಾಂಕ: 15–04–2006.

2) ಶ್ರೀಮತಿ ರೇಖಾ.ಟಿ, ತಹಶೀಲ್ದಾರ್ ಇವರ ಮನವಿ ದಿನಾಂಕ: 16–10–2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 15–04–2006ರ ಅಧಿಸೂಚನೆಯಲ್ಲಿ, ಶ್ರೀಮತಿ ರೇಖಾ.ಟಿ ಇವರನ್ನು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ: 16–09–1992 ರಿಂದ 18–04–2006ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ, ಶ್ರೀಮತಿ. ಟಿ.ರೇಖಾ, ತಹಶೀಲ್ದಾರ್ ಇವರ ಸೇವಾ ಪುಸ್ತಕವನ್ನು ಪರಿಶೀಲಿಸಲಾಗಿ, ಸದರಿಯವರು ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹಶಿಕ್ಷಕರಾಗಿ ಶಿಕ್ಷಣ ಇಲಾಖೆಯ ಜ್ಞಾಪನಾ ಸಂ: ಅ.1.ಪ್ರಾ.ಶಾ.ಸಿ.ನೇಮಕ 1/91–92, ದಿನಾಂಕ: 05–09–1992ರನ್ವಯ ಪ್ರಾಥಮಿಕ ಶಾಲಾ ಸಹ ಶಿಕ್ಷಕರಾಗಿ ನೇಮಕಗೊಂಡು, ದಿನಾಂಕ: 16–09–92 ರಂದು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಜಕ್ಕೂರು ಲೇಔಟ್ ಬೆಂಗಳೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ತದನಂತರ ದಿನಾಂಕ: 18–04–2006ರಂದು ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಶ್ರೀಮತಿಯವರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ: 16–09–1992 ರಿಂದ 18–04–2006ರವರೆಗಿನ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀಮತಿ ರೇಖಾ.ಟಿ, ತಹಶೀಲ್ದಾರ್ ಇವರ ಮನವಿಯನ್ನು ಸರ್ಕಾರವು ಕೂಲಕಂಕಷವಾಗಿ ಪರಿಶೀಲಿಸಿ ಶ್ರೀಮತಿಯವರ ಮೂಲ ಸೇವೆ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀಮತಿ ರೇಖಾ.ಟಿ ತಹ'ಶೀಲ್ದಾರ್ ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಇವರ ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ, ಸಹ ಶಿಕ್ಷಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 16–09–1992 ರಿಂದ 18–04–2006ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 02 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2009.**

ಮೇಲೆ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀಮತಿ ರೇಖಾ.ಟಿ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ: 16–09–1992 ರಿಂದ 18–04–2006ರ ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ 7–8) ರವರ ಟಿಪ್ಪಣಿ ಸಂ: ಆಇ 29 ವೆಚ್ಚ–7/2009, ದಿನಾಂಕ: 27–01–2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.607

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ವೈ. ಕಾಳೀರಾಜ್, ಹಿಂದಿನ ತಹಶೀಲ್ದಾರ್, (ಹಾಲಿ ನಿವೃತ್ತರು) ಚಿತ್ರದುರ್ಗ ತಾಲ್ಲೂಕು ಹಾಗೂ ಶ್ರೀ ಸಿ.ಜೆ. ನಾಸಿರುದ್ದೀನ್, ರಾಜಸ್ವ ನಿರೀಕ್ಷಕರು, ಹಿರೆಗುಂಟನೂರು (ಹೋಬಳಿ), ತಾಲ್ಲೂಕು ಕಛೇರಿ, ಚಿತ್ರದುರ್ಗ ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದರ್ಗು ಇವರ ಪ್ರಸ್ತಾವನೆ ಸಂ: ಸಿಬ್ಬಂದಿ(2): ಸಿಆರ್:73/ 2005–06, ದಿನಾಂಕ: 03–06–2008.

2) ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 87 ಎಡಿಇ 2006, ದಿನಾಂಕ: 31–07–2008.

3) ಶ್ರೀ ವೈ. ಕಾಳೀರಾಜ್, ನಿವೃತ್ತ ತಹಶೀಲ್ದಾರ್ ಇವರು ನೀಡಿರುವ ರಕ್ಷಣಾ ಹೇಳಿಕೆ ದಿನಾಂಕ: 21–08–2008.

4) ಶ್ರೀ ನಾಸಿರುದ್ದೀನ್, ರಾಜಸ್ವ ನಿರೀಕ್ಷಕರು, ಹಿರೇಗುಂಟನೂರು ಹೋಬಳಿ, ಇವರ ರಕ್ಷಣಾ ಹೇಳಿಕೆ ದಿನಾಂಕ: 18–08–2008.

**ಪ್ರಸ್ತಾವನೆ:**

ಶ್ರೀ ವೈ. ಕಾಳಿರಾಜ್, ಹಿಂದಿನ ತಹಶೀಲ್ದಾರ್, ಚಿತ್ರದುರ್ಗ ತಾಲ್ಲೂಕು (ಪ್ರಸ್ತುತ ನಿವೃತ್ತರು) ಹಾಗೂ ಶ್ರೀ ನಾಸಿರುದ್ದೀನ್, ರಾಜಸ್ವ ನಿರೀಕ್ಷಕರು, ಇವರು ಈ ಹಿಂದೆ ಚಿತ್ರದುರ್ಗ ತಾಲ್ಲೂಕಿನಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕಸಬಾ ಹೋಬಳಿಯ ರಾಜಸ್ವನಿರೀಕ್ಷಕರಾಗಿದ್ದ ಶ್ರೀ ಮಹಮ್ಮದ್ ಸಮೀವುಲ್ಲಾ, ಉಪತಹಶೀಲ್ದಾರ್‌ರವರು

ದಿನಾಂಕ: 16–10–1998 ರಂದು ಮೃತಪಟ್ಟಿದ್ದರಿಂದ ಅವರ ಮಗಳಾದ ಶ್ರೀಮತಿ ಮಹಸೀನ ಫಾತೀಮಾ ಇವರಿಗೆ ಸರ್ಕಾರದ ನಿಯಮಗಳನ್ನು ಉಲ್ಲಂಘಿಸಿ, ಇವರು ವಿವಾಹಿತಳಾಗಿದ್ದು, ಇವರ ಪತಿ ಶ್ರೀ ಸೈಯದ್.ಎ ಎಂಬ ಹೆಸರಿನವರಾಗಿದ್ದು, ಹಾಗೂ ಮೃತರ ಪತ್ನಿ ಶ್ರೀಮತಿ ಖುರ್ಷಿದ್‌ಉನ್ನೀಸಾ ಇವರು ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಯಲ್ಲಿ ಅಧ್ಯಾಪಕಿಯಾಗಿ ಕೆಲಸದಲ್ಲಿದ್ದರೂ ಕೂಡ ಅನುಕಂಪದ ಆಧಾರದ ಮೇಲೆ ಇವರ ಮಗಳಿಗೆ ಸರ್ಕಾರಿ ಕೆಲಸ ನೀಡಲು ಅವಕಾಶವಿಲ್ಲದಿದ್ದರೂ ಈ ಕೆಲಸ ಕೊಟ್ಟಿರುತ್ತಾರೆಂಬ, ಆರೋಪದ ಮೇಲೆ ಇವರ ವಿರುದ್ಧ 1957ರ ಕೆ.ಸಿ.ಎಸ್.ಆರ್ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳನ್ವಯ, ಶಿಸ್ತು ಕ್ರಮ ಜರುಗಿಸುವಂತೆ ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4ರವರೆಗೆ ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಮೇಲೆ ಓದಲಾದ ಕ್ರ.ಸಂ: (2)ರ ದಿನಾಂಕ: 31–07–2008ರಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಗಳನ್ನು ಅನುಬಂಧ 1 ರಿಂದ 4ರವರೆಗೆ ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ವೈ. ಕಾಳೀರಾಜ್, ನಿವೃತ್ತ ತಹಶೀಲ್ದಾರ್, ತಾಲ್ಲೂಕು ಕಛೇರಿ, ಚಿತ್ರದುರ್ಗ ಹಾಗೂ ಶ್ರೀ ಸಿ.ಜಿ.ನಾಸಿರುದ್ದೀನ್, ರಾಜಸ್ವ ನಿರೀಕ್ಷಕರು, ಹಿರೇಗುಂಟನೂರು ಹೋಬಳಿ, ತಾಲ್ಲೂಕು ಕಛೇರಿ, ಚಿತ್ರದುರ್ಗ ಇವರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಸೂಚಿಸಲಾಗಿತ್ತು.

ಮೇಲೆ ಕ್ರ.ಸಂ: (3) ಮತ್ತು (4)ರಲ್ಲಿ ಶ್ರೀ ವೈ.ಕಾಳೀರಾಜ್, ಹಿಂದಿನ ತಹಶೀಲ್ದಾರ್, ಹಾಗೂ ನಾಸಿರುದ್ದೀನ್, ರಾಜಸ್ವ ನಿರೀಕ್ಷಕರು ತಾಲ್ಲೂಕು ಕಛೇರಿ, ಚಿತ್ರದುರ್ಗ ಇವರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ, ಕೋರಿರುತ್ತಾರೆ. ಸದರಿ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿದ್ದು, ಆಪಾದನೆಯನ್ನು ಸಮರ್ಥಿಸುವಂತಹ ಅಂಶಗಳು ಹಾಗೂ ದಾಖಲಾತಿಗಳನ್ನು ಒದಗಿಸಿರುವುದಿಲ್ಲವಾದ್ದರಿಂದ, ಸರ್ಕಾರವು ಈ ಪ್ರಕರಣದಲ್ಲಿ ಸತ್ಯಾಸತ್ಯೆಯನ್ನು ತಿಳಿಯಲು, ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 87 ಎಡಿಇ 2006, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವೈ. ಕಾಳಿರಾಜ್, ಹಿಂದಿನ ತಹಶೀಲ್ದಾರ್, ಚಿತ್ರದುರ್ಗ ತಾಲ್ಲೂಕು (ಪ್ರಸ್ತುತ ನಿವೃತ್ತರು) ಹಾಗೂ ಶ್ರೀ ನಾಸಿರುದ್ದೀನ್, ರಾಜಸ್ವ ನಿರೀಕ್ಷಕರು ಇವರ ವಿರುದ್ಧ ಮಾಡಲಾಗಿರುವ ಆರೋಪದ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಜೆ.ಸಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಗಣಪತಿ ದೇವಸ್ಥಾನದ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–580002 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರುದುರ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿ:11–04–2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.65

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎ. ಕೊಟ್ರಪ್ಪ, ಹಿಂದಿನ ತಹಶೀಲ್ದಾರ್, ಹರಪನಹಳ್ಳಿ, ಪ್ರಸ್ತುತ ನಿವೃತ್ತರು ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ ದೋಷಮುಕ್ತಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ದಾವಣಗೆರೆ ಇವರ ಪತ್ರದ ಸಂ: ಸಿಬ್ಬಂದಿ/ವಿವ/81/07–08, ದಿನಾಂಕ: 11–08–2008.

2) ಶ್ರೀ ಎ. ಕೊಟ್ರಪ್ಪ, ಇವರಿಗೆ ನೀಡಲಾದ ಆರೋಪ ಪಟ್ಟಿಗಳನ್ನೊಳಗೊಂಡ ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 25 ಎಡಿಇ 2008, ದಿನಾಂಕ: 20–10–2008.

3) ಶ್ರೀ ಎ.ಕೊಟ್ರಪ್ಪ, ಇವರ ಲಿಖಿತ ಸಮಜಾಯಿಷಿ ದಿನಾಂಕ: 31–10–2008.

**ಪ್ರಸ್ತಾವನೆ:**

ಶ್ರೀ ಎ. ಕೊಟ್ರಪ್ಪ, ನಿವೃತ್ತ ತಹಶೀಲ್ದಾರ್ ಇವರು ಈ ಹಿಂದೆ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ಲೋಪ ಎಸಗಿದ ಕಾರಣ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿ ಮೇಲೆ ಕ್ರ.ಸಂ: (1)ರಲ್ಲಿ ಓದಲಾದ ಪತ್ರದಲ್ಲಿ ದಾವಣಗೆರೆ ಜಿಲ್ಲಾಧಿಕಾರಿಯವರು ಪ್ರಸ್ತಾವನೆಯನ್ನು ಸಲ್ಲಿಸಿ, ಸದರಿಯವರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11ರಡಿಯಲ್ಲಿ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸ್‌ನೊಂದಿಗೆ ಆರೋಪಿತ ಅಧಿಕಾರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ: 20–10–2008ರ ನೋಟೀಸ್ ಮೂಲಕ ಶ್ರೀ ಎ.ಕೊಟ್ರಪ್ಪ ಇವರಿಗೆ ನೀಡಲಾಗಿದೆ. ಕ್ರ.ಸಂ: (3)ರಲ್ಲಿ ಓದಲಾದ ದಿನಾಂಕ: 31–10–2008ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎ.ಕೊಟ್ರಪ್ಪ ಇವರು ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿರುತ್ತಾರೆ.

ಶ್ರೀ ಎ. ಕೊಟ್ರಪ್ಪ, ನಿವೃತ್ತ ತಹಶೀಲ್ದಾರ್ ಇವರ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಲಾಗಿ, ಸದರಿಯವರ ವಿರುದ್ಧ 2 ಆರೋಪಗಳನ್ನು ಮಾಡಲಾಗಿದೆ.

**ಆರೋಪ–1:** ಶ್ರೀ ಎ.ಕೊಟ್ರಪ್ಪ, ಹಿಂದಿನ ತಹಶೀಲ್ದಾರ್, ಹರಪನಹಳ್ಳಿ ಆದ ನೀವು ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಹರಪನಹಳ್ಳಿ ತಾಲ್ಲೂಕಿನಲ್ಲಿ ತಹಶೀಲ್ದಾರ್ ಆಗಿ ಸೇವೆ ಸಲ್ಲಿಸಿದ ಅವಧಿಯಲ್ಲಿ ಮಾಹೆಯಾನ ಮುಂಗಡ ಪ್ರವಾಸ ಪತ್ರ ತಯಾರಿಸಿ, ಉಪವಿಭಾಗಾಧಿಕಾರಿಗಳಿಗೆ ಕಳುಹಿಸುತ್ತಿಲ್ಲ ಹಾಗೂ ಕಛೇರಿಯಲ್ಲಿಯೂ ಸಹ ನಿರ್ವಹಿಸದೇ ಕರ್ತವ್ಯ ನಿರ್ಲಕ್ಷತೆ ತೋರಿ ಸರ್ಕಾರಿ ಕೆಲಸದಲ್ಲಿ ಕರ್ತವ್ಯ ಲೋಪ ಎಸಗಿರುತ್ತೀರಿ.

**ಆರೋಪ –2:** ಶ್ರೀ ಎ.ಕೊಟ್ರಪ್ಪ, ಹಿಂದಿನ ತಹಶೀಲ್ದಾರ್, ಹರಪನಹಳ್ಳಿ ಆದ ನೀವು ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ವಿಧಾನಪರಿಷತ್ ಸದಸ್ಯರ ಚುನಾವಣೆ ಸಂಬಂಧ ಮತಪತ್ರ ತರಲು ಗುಲ್ಬರ್ಗಾ ಪ್ರಾದೇಶಿಕ ಆಯುಕ್ತರ ಕಛೇರಿಗೆ 4 ಸಿಬ್ಬಂದಿಯನ್ನು ಕರೆದುಕೊಂಡು ಹೋಗಿದ್ದು, ಈ ಬಗ್ಗೆ ಕಛೇರಿಯಲ್ಲಿ ಯಾರಿಗೂ ಪ್ರಭಾರ ವಹಿಸಿಕೊಡದೇ, ಕರ್ತವ್ಯ ಲೋಪ ಎಸಗಿರುತ್ತೀರಿ.

ಮೇಲ್ಕಂಡ ಆರೋಪಗಳ ಬಗ್ಗೆ ಸದರಿ ಅಧಿಕಾರಿಯವರು ಈ ಕೆಳಕಂಡಂತೆ ತಮ್ಮ ಸಮಜಾಯಿಷಿಯನ್ನು ನೀಡಿರುತ್ತಾರೆ.

**ಆರೋಪ–1ರ ಬಗ್ಗೆ:** ತಾವು ನಾನಾ ರೀತಿಯ ಕೆಲಸಗಳು ಅಂದರೆ, ವಿಶೇಷವಾಗಿ ಚುನಾವಣೆ ಕೆಲಸಗಳಾದ ಮತದಾರರ ಪಟ್ಟಿಗಳ ಪರಿಷ್ಕರಣೆ, ಈಶಾನ್ಯ ಶಿಕ್ಷಕರ ಕ್ಷೇತ್ರದಿಂದ ವಿಧಾನ ಪರಿಷತ್ ಸದಸ್ಯರ ಚುನಾವಣೆ, ಸ್ಥಳೀಯ ಸಂಸ್ಥೆಗಳ ಚುನಾವಣೆ ಕೆಲಸಗಳಲ್ಲದೇ, ಇತರೇ ಜರೂರು ಕೆಲಸಗಳ ಒತ್ತಡದಿಂದಾಗಿ ಮುಂಗಡ ಪ್ರವಾಸ ಪಟ್ಟಿ ತಯಾರಿಸಿ ಉಪವಿಭಾಗಾಧಿಕಾರಿಗಳಿಗೆ ಸಲ್ಲಿಸಿರುವುದಿಲ್ಲವೆಂದು ತಿಳಿಸಿದ್ದಾರೆ.

**ಆರೋಪ–2ರ ಬಗ್ಗೆ**: ತಾವು ವಿಧಾನ ಪರಿಷತ್ ಸದಸ್ಯರ ಚುನಾವಣೆ ಸಂಬಂಧ ಮುದ್ರಿತ ಮತ ಪತ್ರಗಳನ್ನು ತರಲು ಗುಲ್ಬರ್ಗಾ ಪ್ರಾದೇಶಿಕ ಆಯುಕ್ತರ ಕಛೇರಿಗೆ 3 ಜನ ಸಿಬ್ಬಂದಿಯನ್ನು ಕರೆದುಕೊಂಡು ಹೋಗಿದ್ದು, ಹಾಗೂ ಈ ಬಗ್ಗೆ ತಾಲ್ಲೂಕು ಕಛೇರಿಗೆ ಚುನಾವಣಾ ಶಿರಸ್ತೇದಾರರಿಗೆ ತಿಳಿಸಿರುವುದಾಗಿ ಹೇಳಿರುವರು. ಯಾವುದೇ ಸರ್ಕಾರಿ ನೌಕರರನ್ನು ಸರ್ಕಾರಿ ಕಛೇರಿ ಕೆಲಸದ ಮೇಲೆ ತೆರಳಿದಾಗ, ಪ್ರಭಾರ ವಹಿಸಿಕೊಡುವಂತೆ ನಿಯಮಾವಳಿಗಳಲ್ಲಿ ಅವಕಾಶವಿರುವುದಿಲ್ಲ. ಆದುದರಿಂದ ತಾವು ಯಾವುದೇ ಕರ್ತವ್ಯ ಲೋಪ ಎಸಗಿಲ್ಲವೆಂದು ತಿಳಿಸಿದ್ದಾರೆ.

ಈ ಹಿನ್ನಲೆಯಲ್ಲಿ, ಆರೋಪಗಳು ಮತ್ತು ಇವರ ಸಮಜಾಯಿಷಿಯನ್ನು ಪರಿಶೀಲಿಸಲಾಗಿದೆ, ಆರೋಪಗಳಲ್ಲಿ ಗುರುತರವಾದ ಕರ್ತವ್ಯಲೋಪ ಎಸಗಿರುವುದು ಕಂಡು ಬರುವುದಿಲ್ಲ. ಇದು ಕೇವಲ ಕೆಲಸದ ಒತ್ತಡದಿಂದಾಗಿ ಹಾಗೂ ಸರ್ಕಾರಿ ಕೆಲಸದ ನಿಮಿತ್ತ ಗುಲ್ಬರ್ಗಾಕ್ಕೆ ಒಂದು ದಿನ ಮಾತ್ರ ಹೋಗಿರುವುದಾಗಿ, ಇದರಲ್ಲಿ ಯಾವುದೇ ಉದ್ದೇಶಪೂರ್ವಕವಾಗಿ ಲೋಪ ಉಂಟಾಗಿರುವುದಿಲ್ಲ. ಅಧಿಕಾರಿಯವರು ಪ್ರಸ್ತುತ ಸೇವೆಯಿಂದ ನಿವೃತ್ತರಾಗಿದ್ದು, ಈ ಆರೋಪಗಳಿಂದ ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗಿರುವುದಿಲ್ಲ. ಸರ್ಕಾರಿ ಕೆಲಸದ ನಿಮಿತ್ತ ತೆರಳಿದಾಗ ಪ್ರಭಾರ ವ್ಯವಸ್ಥೆ ಮಾಡುವ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಅಧಿಕಾರಿಯವರ ಸಮಜಾಯಿಷಿಯನ್ನು ಒಪ್ಪಿ ಇವರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ಆರ್‌ಡಿ 25 ಎಡಿಇ 2008, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2008.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ, ಶ್ರೀ ಎ.ಕೊಟ್ರಪ್ಪ, ಹಿಂದಿನ ತಹಶೀಲ್ದಾರ್, ಹರಪನಹಳ್ಳಿ, ಪ್ರಸ್ತುತ ನಿವೃತ್ತರು ಇವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ, ಸದರಿ ಅಧಿಕಾರಿಯವರ ವಿರುದ್ಧ ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ. ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 24-06-2008 ರಿಂದ 27-06-2008ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100 (1)(ಬಿ) ಪ್ರಕಾರ ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.77

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ದಾದಾರಾವ್, ಹಿಂದಿನ ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೆ.ಜಿ.ಎಫ್ (ಪ್ರಸ್ತುತ ತಹಶೀಲ್ದಾರ್, ಬಿಎಂಟಿಎಫ್, ಬೆಂಗಳೂರು) ಇವರ ವಿರುದ್ಧದ ಇಲಾಖಾ ವಿಚಾರಣೆಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರ ಆದೇಶ ಸಂ: ಇಎಲ್.ಎನ್.ಸಿಆರ್ 37: 2007-08, ದಿನಾಂಕ: 24-12-2007.
2. ಸರ್ಕಾರದ ಆದೇಶ ಸಂ: ಆರ್‌ಡಿ 01 ಎಡಿಇ 2008, ದಿನಾಂಕ: 25-01-2008.
3. ಸರ್ಕಾರಿ ಆದೇಶ ಸಂ: ಆರ್‌ಡಿ 01 ಎಡಿಇ 2008, ದಿನಾಂಕ: 02-04-2008.
4. ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರ ಪತ್ರ ಸಂ: ಸಿಸಿಎ:ಸಿಆರ್: 05/ 2007-08, ದಿನಾಂಕ: 03-05-2008.
5. ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ: 13-08-2008.
6. ಶ್ರೀ ದಾದಾರಾವ್ ಇವರ ಲಿಖಿತ ಸಮಜಾಯಿಷಿ ದಿನಾಂಕ: 26-09-2008.

**ಪ್ರಸ್ತಾವನೆ:**

ಶ್ರೀ ದಾದಾರಾವ್, ಹಿಂದಿನ ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೆ.ಜಿ.ಎಫ್ ಇವರು ಕೆ.ಜಿ.ಎಫ್. ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಅನೋಪಚಾರಿಕ ಪಡಿತರ ಕೇಂದ್ರ ಸಹಾಯಕ ಮತದಾರರ ನೋಂದಣಾಧಿಕಾರಿಯ ಕಾರ್ಯವನ್ನು ನಿರ್ವಹಿಸದೇ ಕರ್ತವ್ಯ ಲೋಪ ಎಸಗಿರುವುದು ಮೇಲುನೋಟಕ್ಕೆ ಕಂಡುಬಂದಿದ್ದರಿಂದ ಮೇಲೆ ಓದಲಾದ ಕ್ರ.ಸಂ: (1), ದಿನಾಂಕ: 24-12-2007ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ಕಂದಾಯ ಇಲಾಖೆಯ ಘಟನೋತ್ತರ ಅನುಮೋದನೆ ನಿರೀಕ್ಷಿಸಿ, ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್.ಆರ್.ನಿಯಮ 10(1)ರಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು.

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ಹೊರಡಿಸಿರುವ ದಿನಾಂಕ: 24-12-2007ರ ಅಮಾನತ್ತು ಆದೇಶಕ್ಕೆ ಸರ್ಕಾರವು ಘಟನೋತ್ತರ ಮಂಜೂರಾತಿಯನ್ನು ನೀಡಲಾಗಿರುತ್ತದೆ. ಶ್ರೀ ದಾದಾರಾವ್ (ಅಮಾನತ್ತಿನಲ್ಲಿ) ತಹಶೀಲ್ದಾರ್ ಇವರು ದಿನಾಂಕ: 19-02-2008ರಂದು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸುತ್ತಾ ತಮಗೆ ಈಗಾಗಲೇ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆ) ಬೆಂಗಳೂರುರವರು ದಿನಾಂಕ: 31-12-2007ರನ್ವಯ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದು, ಸದರಿ ನೋಟೀಸಿಗೆ ತಮ್ಮ ಲಿಖಿತ ಸಮಜಾಯಿಷಿಯನ್ನು ಸಹ ನೀಡಲಾಗಿದ್ದರಿಂದ ಹಾಗೂ ದಿನಾಂಕ: 31-08-2008ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದುತ್ತಿರುವುದಾಗಿ ತಿಳಿಸುತ್ತಾ, ತಮ್ಮ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಸರ್ಕಾರವು ಸದರಿಯವರ ಮನವಿಯನ್ನು ಒಪ್ಪಿ ಅಮಾನತ್ತಿನಿಂದ ತೆರವುಗೊಳಿಸಿ ಮೇಲೆ ಓದಲಾದ ಕ್ರ.ಸಂ: (3) ದಿನಾಂಕ: 02-04-2008ರಲ್ಲಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಟ್ಟು, ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ, ತಹಶೀಲ್ದಾರ್, ಬಿ.ಎಂ.ಟಿ.ಎಫ್, ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ, ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ: (4) ದಿನಾಂಕ: 03-05-2008ರಲ್ಲಿ, ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಇವರು ಶ್ರೀ ದಾದಾರಾವ್, ತಹಶೀಲ್ದಾರ್ ನಿಯೋಜನೆ ಮೇಲೆ ಆಹಾರ ಪಡಿತ ಅಧಿಕಾರಿ, ಕೆ.ಜಿ.ಎಫ್, ಇವರ ವಿರುದ್ಧದ ಚುನಾವಣೆ ಸಂಬಂಧಿಸಿದ ಕರ್ತವ್ಯ ಲೋಪದ ಕುರಿತು ಅನುಬಂಧ-1 ರಿಂದ 4ನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಸದರಿ ಕರಡು ದೋಷಾರೋಪಣಾ ಪಟ್ಟಿಯೊಂದಿಗೆ ಮೇಲೆ ಓದಲಾದ ಕ್ರ.ಸಂ:(5) ದಿನಾಂಕ: 13-08-2008 ರಲ್ಲಿ ಶ್ರೀ ದಾದಾರಾವ್, ತಹಶೀಲ್ದಾರ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ, ಶ್ರೀ ದಾದಾರಾವ್ ಇವರು ಮೇಲೆ ಓದಲಾದ ಕ್ರ.ಸಂ: (6)ರ ದಿನಾಂಕ: 26-09-2008ರಲ್ಲಿ ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುತ್ತಾ, ಅವರ

ಕಛೇರಿಯಲ್ಲಿ ಸಿಬ್ಬಂದಿ ಕೊರತೆ ಇದ್ದುದರಿಂದ ಹಾಗೂ ಮತದಾರರ ಪಟ್ಟಿ ಪರಿಷ್ಕರಣೆ ಕಾರ್ಯಕ್ಕೆ ಯಾವುದೇ ಸಿಬ್ಬಂದಿಯನ್ನು ನಿಯೋಜಿಸಿಲ್ಲವೆಂದು ಹಾಗೂ ವಾಹನವನ್ನು ನೀಡಿಲ್ಲವೆಂದು ಮತ್ತು ತಾವು ದಿನಾಂಕ: 15–08–2007 ರಿಂದ 12–10–2007ರ ವರೆಗೆ ವೈದ್ಯಕೀಯ ಕಾರಣಗಳ ಮೇಲೆ ರಜೆಯ ಮೇಲೆ ಇದ್ದುದರಿಂದ, ತಮ್ಮ ವಿರುದ್ಧದ ಆಪಾದನೆಯಿಂದ ಕೈಬಿಡುವಂತೆ ಕೋರಿಕೊಂಡಿರುತ್ತಾರೆ. ಆದ್ದರಿಂದ ಸರ್ಕಾರವು ಶ್ರೀ ದಾದಾರಾವ್ ಇವರು ಸಲ್ಲಿಸಿರುವ ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಿ, ಅವರು ವೈದ್ಯಕೀಯ ಕಾರಣಗಳಿಂದಾಗಿ ರಜೆಯಲ್ಲಿ ಇದ್ದುದನ್ನು ಪರಿಗಣಿಸಿ, ಇನ್ನು ಮುಂದೆ ಚುನಾವಣಾ ಕಾರ್ಯದಲ್ಲಿ ಜಾಗರೂಕತೆಯಾಗಿರುವಂತೆ ಎಚ್ಚರಿಕೆ ನೀಡಿ ಅವರು ಸಲ್ಲಿಸಿರುವ ಲಿಖಿತ ಸಮಜಾಯಿಷಿಯನ್ನು ಒಪ್ಪಿ, ಅವರ ವಿರುದ್ಧದ ಉದ್ದೇಶಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 01 ಎಡಿಇ 2008, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ, ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ದಾದಾರಾವ್, ತಹಶೀಲ್ದಾರ್ ನಿಯೋಜನೆ ಮೇಲೆ ಹಿಂದಿನ ಸಹಾಯಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಕೆ.ಜಿ.ಎಫ್, ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಟಿ.ಎಫ್, ಬೆಂಗಳೂರು ಇವರ ವಿರುದ್ಧದ ಆರೋಪಗಳ ಕುರಿತು ಸದರಿಯವರು ಸಲ್ಲಿಸಿರುವ ಲಿಖಿತ ಸಮಜಾಯಿಷಿಯನ್ನು ಒಪ್ಪಿ ಇನ್ನು ಮುಂದೆ ಚುನಾವಣಾ ಕಾರ್ಯದಲ್ಲಿ ಜಾಗರೂಕತೆಯಿಂದ ಕೆಲಸ ನಿರ್ವಹಿಸುವಂತೆ, ತಿಳಿಸಿ ಅವರ ವಿರುದ್ಧ ಉದ್ದೇಶಿಸಿರುವ ಇಲಾಖಾ ವಿಚಾರಣೆಯನ್ನು ಈ ಪ್ರಕರಣದ ಮಟ್ಟಿಗೆ ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.78

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಯು.ಜಿ. ನಾಯಕ್, ಹಿಂದಿನ ತಹಶೀಲ್ದಾರ್, ಭಟ್ಕಳ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ– ವಿಚಾರಣಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪ್ರಸ್ತಾವನೆ ಪತ್ರ ಸಂ: ಸಿಬ್ಬಂದಿ(3):ವಿವ: 24/2005–06, ದಿನಾಂಕ: 29–10–2005, 12–11–2007.
2) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ: 29–05–2006.
3) ಶ್ರೀ ಯು.ಜಿ.ನಾಯಕ್ ಇವರ ಲಿಖಿತ ಸಮಜಾಯಿಷಿ ದಿ: 14–08–2006.
4) ಸರ್ಕಾರದ ಆದೇಶ ಸಂ: ಆರ್‌ಡಿ 61 ಎಡಿಇ 2005, ದಿನಾಂಕ: 22–08–2008.

**ಪ್ರಸ್ತಾವನೆ:**

ಶ್ರೀ ಯು.ಜಿ. ನಾಯಕ್, ಇವರ ಹಿಂದೆ ಉಪತಹಶೀಲ್ದಾರ್, ನಾಡಕಛೇರಿ, ಕೋಣಂದೂರು (ಪ್ರಸ್ತುತ ನಿವೃತ್ತ ತಹಶೀಲ್ದಾರ್) ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ನೊಣಬೂರು ಗ್ರಾಮದ ಸ.ನಂ. 162ರ ಜಮೀನಿನ ಖಾತೆದಾರರ ಹೆಸರು ಮತ್ತು ಅಧಿಬೋಗದಾರಿಕೆ ಹಕ್ಕು ಪತ್ರ ಇತ್ಯಾದಿ ದಾಖಲೆಗಳನ್ನು ಪರಿಶೀಲಿಸದೇ, ಗ್ರಾಮಲೆಕ್ಕಾಧಿಕಾರಿಗಳು ನೀಡಿದ ವರದಿಯನ್ನು ಮಾತ್ರ ಪರಿಶೀಲಿಸಿ, ನೊಣಬೂರು ಸರ್ವೆ ನಂ: 162ರಲ್ಲಿ 1–06 ಎಕರೆ ತರಿ ಜಮೀನನ್ನು ಅಧಿಬೋಗದಾರಿಕೆ ಹಕ್ಕು ಮಂಜೂರಾತಿ ಪೂರ್ವದಲ್ಲಿಯೇ ಶ್ರೀ ಹರನಾಥ್‌ಭಟ್ ಬಿನ್ ಅನಂತ ಪದ್ಮನಾಭ ಭಟ್ ಇವರ ಹೆಸರಿಗೆ ಖಾತೆ, ಪಹಣಿ ಬದಲಾವಣೆ ಮಾಡಿ ಜುಬಾನಿ ಹಿಸ್ಸೆ ಪತ್ರದ ಮೇರೆ ಎಂ.ಆರ್.9:94–95, ದಿನಾಂಕ: 10–4–95 ರಂತೆ ಅಕ್ರಮವಾಗಿ ಮ್ಯೂಟೇಷನ್ ಅನ್ನು ದೃಢೀಕರಿಸಿ, ಕಾನೂನನ್ನು ಉಲ್ಲಂಘನೆ ಮಾಡಿ, ಕರ್ತವ್ಯ ನಿರ್ಲಕ್ಷ ಮತ್ತು ಬೇಜವಾಬ್ದಾರಿಯಿಂದ ವರ್ತಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) 1966ರ ನಿಯಮಾವಳಿಗಳನ್ನು ಉಲ್ಲಂಘಿಸಿರುವ ಆರೋಪದ ಮೇರೆಗೆ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರ.ಸಂ.(1), ದಿನಾಂಕ: 29–10–2005ರಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆ ಅನ್ವಯ, ಸರ್ಕಾರವು ಶ್ರೀ ಯು.ಜಿ. ನಾಯಕ್, ತಹಶೀಲ್ದಾರ್, ಇವರಿಗೆ ದೋಷಾರೋಪಣಾ ಪಟ್ಟಿ (ಅನುಬಂಧ 1 ರಿಂದ 4ರವರೆಗೆ) ಸಿಸಿಎ ನಿಯಮಾವಳಿ ಅನ್ವಯ, ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ: 29–05–2006 ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಯು.ಜಿ. ನಾಯಕ್ ಮೇಲೆ ಓದಲಾದ ಕ್ರ.ಸಂ, ದಿನಾಂಕ: 14–08–2006ರಲ್ಲಿ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ, ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆದು ನಿಯಮಾನುಸಾರ ಮ್ಯೂಟೇಷನ್ ಮಂಜೂರು ಮಾಡಲಾಗಿದೆ ಎಂದು ತಿಳಿಸಿ, ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸದರಿಯವರ ಲಿಖಿತ ಸಮಜಾಯಿಷಿಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ, ಗದಗ್, ಗದಗ್ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ

ಮತ್ತು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ಉಲ್ಲೇಖಿತ (4)ರ ದಿನಾಂಕ: 22–08–2008ರ ಆದೇಶದಲ್ಲಿ ನೇಮಿಸಲಾಗಿತ್ತು.

ಶ್ರೀ ಎಸ್.ಜಿ. ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ದಿನಾಂಕ: 29–08–2008ರಲ್ಲಿ ಮನವಿ ಸಲ್ಲಿಸಿ, ತಾವು ಗದಗ್ ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ಪೂರ್ಣಕಾಲಿಕ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಜೊತೆಗೆ ಸಹಾಯಕ ರಿಜಿಸ್ಟ್ರಾರ್ ಮತ್ತು ಸಹಾಯಕ ಆಡಳಿತಾಧಿಕಾರಿ ಅಂತ ಪ್ರಭಾರನಾಗಿ ಕೆಲಸ ನಿರ್ವಹಿಸುತ್ತಿರುವುದಾಗಿ, ಈ ಕಾರಣ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸುವುದು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ಈ ಬಗ್ಗೆ ಬೇರೆ ವ್ಯವಸ್ಥೆ ಮಾಡಿಕೊಳ್ಳಲು ಕೋರಿರುತ್ತಾರೆ. ಸದರಿ ಮನವಿಯನ್ನು ಸರ್ಕಾರವು ಪರಿಶೀಲಿಸಿ, ಈ ಪ್ರಕರಣಕ್ಕೆ ಬೇರೆ ನಿವೃತ್ತ ಜಿಲ್ಲಾ ಸತ್ರ ನ್ಯಾಯಾಧೀಶರನ್ನು ನೇಮಿಸಲು ತೀರ್ಮಾನಿಸಲಾಗಿರುತ್ತದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 61 ಎಡಿಇ 2005, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಯು.ಜಿ. ನಾಯಕ್, ಹಿಂದಿನ ಉಪ ತಹಶೀಲ್ದಾರ್, ನಾಡಕಛೇರಿ, ಕೋಣಂದೂರು, ತೀರ್ಥಹಳ್ಳಿ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿಯೋಜಿಸಲಾಗಿದ್ದ ಶ್ರೀ ಎಸ್.ಜಿ.ಪಲ್ಲೇದ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ, ಗದಗ್ ಜಿಲ್ಲೆ ಇವರ ಬದಲಿಗೆ ಶ್ರೀ ಎನ್.ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, #1033, 9ನೇ 'ಬಿ' ಮೇನ್, ಜ್ಯೂಡಿಷಿಯಲ್ ಲೇಔಟ್, ಜಿಕೆವಿಕೆ ಪೋಸ್ಟ್, ಬೆಂಗಳೂರು–560065 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಈ ಇಲಾಖೆ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಕಛೇರಿ ಆವರಣದಲ್ಲಿ ನಡೆಸಲು ಮಂಡನಾಧಿಕಾರಿಗಳಾದ ಕೇಂದ್ರಸ್ಥಾನಿಕ ಸಹಾಯಕರು, ಶಿವಮೊಗ್ಗ ಜಿಲ್ಲೆ ಇವರು ಕ್ರಮ ಕೈಗೊಳ್ಳುವುದು.

ಸರ್ಕಾರದ ಆದೇಶ ಸಂ: ಕಂಇ 61 ಎಡಿಇ 2005, ದಿನಾಂಕ: 22–08–2008ರ ಆದೇಶದಲ್ಲಿನ ಉಳಿದ ಅಂಶಗಳು (ವಿಚಾರಣಾಧಿಕಾರಿಗಳ ಸಂಭಾವನೆಯನ್ನು ಹೊರತುಪಡಿಸಿ) ಮುಂದುವರೆಯುತ್ತವೆ. ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿ:11–04–2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣೆಯನ್ನು ಆದಷ್ಟು ಶೀಘ್ರವಾಗಿ ಮುಕ್ತಾಯಗೊಳಿಸಿ, ಸರ್ಕಾರಕ್ಕೆ 2 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 79 **ಬಿ.ವಿ.ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಕೆ. ಮುರಳೀಧರ್, ತಹಶೀಲ್ದಾರ್, ಉಡುಪಿ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** ಅಪರ ನಿಬಂಧಕರು, ವಿಚಾರಣೆಗಳು–9, ಕರ್ನಾಟಕ ಲೋಕಾಯುಕ್ತ ಇವರ ಅ.ಸ.ಪತ್ರ ಸಂ: ಕಂಪ್ಲೆಂಟ್/ಲೋಕ್/ಎಂವೈಎಸ್/447/ 2005/ಅ.ನಿ.ವಿ–9, ದಿನಾಂಕ: 20–10–2008.

**ಪ್ರಸ್ತಾವನೆ:**

ಶ್ರೀ ಕೆ.ಮುರಳೀಧರ್, ತಹಶೀಲ್ದಾರ್, ಉಡುಪಿ ತಾಲ್ಲೂಕು ಇವರ ವಿರುದ್ಧ ದಿನಾಂಕ: 28–10–2005 ರಂದು ಫಿರ್ಯಾದುದಾರರಾದ ಶ್ರೀ ವಾಸುದೇವ ಅಡಿಗ, ಉಡುಪಿ ತಾಲ್ಲೂಕು ಇವರು ಉಡುಪಿ ತಾಲ್ಲೂಕು, ವಂಡಾರು ಗ್ರಾಮದ ಸ.ನಂ: 30/07 ಹಾಗೂ ಇನ್ನಿತರ ಜಮೀನಿಗೆ ಸಂಬಂಧಪಟ್ಟಂತೆ ಕಾನೂನು ಬಾಹಿರವಾಗಿ ಆದೇಶ ಮಾಡಿರುತ್ತಾರೆ ಎಂದು ಮಾನ್ಯ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರಿಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರನ್ನು ಪರಿಶೀಲಿಸಿ ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ: 20–10–2008ರ ವರದಿ ಹಾಗೂ ಸಂಬಂಧಿಸಿದ ದಾಖಲಾತಿಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತಾ ಕರ್ನಾಟಕ ಲೋಕಾಯುಕ್ತ ಅಧಿನಿಯಮ ಕಲಂ 7(2)ರನ್ವಯ ಪ್ರಾರಂಭಿಕ ತನಿಖೆಯನ್ನು ನಡೆಸಿ ಸದರಿ ಅಧಿನಿಯಮ ಕಲಂ 12(3)ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಶಿಫಾರಸ್ಸು ಮಾಡಿರುವ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಕೆ.ಮುರಳೀಧರ್, ತಹಶೀಲ್ದಾರ್, ಉಡುಪಿ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(3)ರನ್ವಯ ಶಿಫಾರಸ್ಸು ಮಾಡಿರುವಂತೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(ಎ)ರನ್ವಯ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಲು ನಿರ್ವಹಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 56 ಎಡಿಇ 2008, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಕೆ.ಮುರಳೀಧರ್, ತಹಶೀಲ್ದಾರ್, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ, ಪ್ರಸ್ತುತ ವಿಶೇಷ ತಹಶೀಲ್ದಾರ್, ಬ್ರಹ್ಮಾವರ, ಉಡುಪಿ ಜಿಲ್ಲೆ ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು ನಿಯಮ 14(ಎ)ರನ್ವಯ ಇಲಾಖಾ ವಿಚಾರಣೆ ಜರುಗಿಸಿ ಸರ್ಕಾರಕ್ಕೆ ವರದಿ ನೀಡಲು ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.158

**ಬಿ.ವಿ.ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್, ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪ್ರಸ್ತಾವನೆ ಸಂ: ಕಂದಾಯ:ಸಿಬ್ಬಂದಿ–2:2004–05, ದಿನಾಂಕ:18–02–2005.

2) ವ್ಯವಸ್ಥಾಪಕ ನಿರ್ದೇಶಕರು,ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮದ ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂ: ಕರೇಮಾಮ/ಆಡಳಿತ/ವಾ/2007–08/814, ದಿನಾಂಕ: 16–08–2007.

3) ಮಹಾಲೇಖಪಾಲರು (ಎ&ಇ), ಇವರ ಪತ್ರ ಸಂ: GE1/R-3/Vol-529/609, Dt: 24–07–2008.

4) ಸರ್ಕಾರದ ಆದೇಶ ಸಂ: ಆರ್‌ಡಿ 230 ಎಎಸ್‌ಡಿ 2007, ದಿನಾಂಕ: 17–09–2008.

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಕೊಪ್ಪಳ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ, ಬೆಂಗಳೂರು ಇವರ ಪ್ರಸ್ತಾವನೆಗಳಲ್ಲಿ ಶ್ರೀ ವೈ.ಎಸ್.ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್, ಇವರು ವೇತನ ಶ್ರೇಣಿ ರೂ. 6,000–11,200 (ಹಿಂದಿನ ವೇತನ ಶ್ರೇಣಿ) ರಲ್ಲಿ ದಿನಾಂಕ: 01–12–2001 ರಿಂದ ಗರಿಷ್ಠ ಹಂತ ತಲುಪಿರುವುದರಿಂದ ದಿನಾಂಕ: 01–12–2002ರಿಂದ ಅನ್ವಯವಾಗುವಂತೆ 5 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಪ್ರಸ್ತಾಪಿಸಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ದಿನಾಂಕ: 24–07–2008ರ ವರದಿಯಲ್ಲಿ ದಿನಾಂಕ: 01–12–2002ರಿಂದ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿರುತ್ತಾರೆ.

ಸರ್ಕಾರವು ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಮತ್ತು ಮಹಾಲೇಖಪಾಲರು ಕರ್ನಾಟಕ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲೆ ಓದಲಾದ ಕ್ರ.ಸಂ: (4), ದಿನಾಂಕ: 17–09–2008ರಲ್ಲಿ ದಿನಾಂಕ: 01–12–2002 ರಿಂದ ಅನ್ವಯವಾಗುವಂತೆ ಒಟ್ಟು ನಾಲ್ಕು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಲಾಗಿದೆ. ಮುಂದುವರೆದು, ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್ ಇವರಿಗೆ ಬಾಕಿ ಇರುವ 5ನೇ ಸ್ಥಗಿತ ವೇತನ ಬಡ್ತಿಯನ್ನು ವೇತನ ಶ್ರೇಣಿ ರೂ.11,400–21,600 ರಲ್ಲಿ ದಿನಾಂಕ: 01–12–2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 230 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್ ಇವರಿಗೆ ವೇತನ ಶ್ರೇಣಿ ರೂ.11,400–21,600 ರಲ್ಲಿ ಐದನೇ ಸ್ಥಗಿತ ವೇತನ ಬಡ್ತಿಯನ್ನು ದಿನಾಂಕ: 01–12–2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.161

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ವ್ಹಿ.ಪಿ.ಕಾಂಬಳೆ, ನಿವೃತ್ತ ತಹಶೀಲ್ದಾರ್, ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರ ಪ್ರಸ್ತಾವನೆ ಸಂ: ಕಂಶಾ/ಸಿಬ್ಬಂದಿ–1/ವಿವ–145/07–08, ದಿನಾಂಕ: 22–09–2007.

2) ಮಹಾಲೇಖಪಾಲರು (ಎ&ಇ), ಕರ್ನಾಟಕ ಇವರ ಪತ್ರ ಸಂ: GE-1/R3/R 55614/742, Dt: 01–08–2007.

3) ಶ್ರೀ ವ್ಹಿ.ಪಿ. ಕಾಂಬಳೆ, ನಿವೃತ್ತ ತಹಶೀಲ್ದಾರ್ ಇವರ ಮನವಿ ದಿನಾಂಕ: 23–07–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ:(1), ದಿನಾಂಕ: 22–09–2007ರಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಶ್ರೀ ವ್ಹಿ.ಪಿ.ಕಾಂಬಳೆ, ನಿವೃತ್ತ ತಹಶೀಲ್ದಾರ್, ಖಾನಾಪುರ ಇವರು ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುವ ಪೂರ್ವದಲ್ಲಿ

ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ: 30–05–1974 ರಿಂದ 10–12–1977ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ, ಶ್ರೀ ವ್ಹಿ.ಪಿ.ಕಾಂಬಳೆ ನಿವೃತ್ತ ತಹಶೀಲ್ದಾರ್ ಇವರು ಸಲ್ಲಿಸಿರುವ ಅರ್ಜಿ ಹಾಗೂ ಸೇವಾ ಪುಸ್ತಕದ ಜೆರಾಕ್ಸ್ ಪ್ರತಿ ಪರಿಶೀಲಿಸಲಾಗಿ, ಸದರಿಯವರು ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹಶಿಕ್ಷಕರು ಅಂತಾ ಲೋಕಸೇವಾ ಆಯೋಗದ ಮುಖಾಂತರ ಡಿಡಿಪಿಐ, ಬಳ್ಳಾರಿ ಇವರ ಮೆಮೋ ಸಂ: A1/EST.APT-15/ 71-72, Dt: 17-05-1974 ರನ್ವಯ ನೇಮಕಾತಿ ಹೊಂದಿದ್ದು ಅದರಂತೆ, ದಿನಾಂಕ: 30–05–1974 ರಂದು ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿಯ ಸರ್ಕಾರಿ ಮಲ್ಟಿ ಪರ್ಪಸ್ ಹೈಸ್ಕೂಲಿನಲ್ಲಿ ಸೇವೆಗೆ ಹಾಜರಾಗಿ ತದನಂತರ ದಿನಾಂಕ: 10–12–1977ರಂದು ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿರುತ್ತಾರೆ. ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಪ್ರಥಮ ದರ್ಜೆ ಸಹಾಯಕರಾಗಿ ನೇಮಕಾತಿಯಾಗಿ ಜಿಲ್ಲಾಧಿಕಾರಿಗಳು, ರಾಯಚೂರು ಇವರ ಆದೇಶ ಸಂ: ಆರ್‌ಬಿಆರ್: ಇಎಸ್‌ಟಿ;214/77–78, ದಿನಾಂಕ: 10–11–1977ರ ಪ್ರಕಾರ ಕಂದಾಯ ಇಲಾಖೆಯಲ್ಲಿ ದಿನಾಂಕ: 12–12–1977 ರಿಂದ ಸೇವೆ ಪ್ರಾರಂಭಿಸಿದ್ದಾರೆಂದು ಸದರಿಯವರು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ದಿನಾಂಕ: 30–05–1974 ರಿಂದ 10–12–1977ರ ವರೆಗಿನ ಸೇವಾ ಅವಧಿಯನ್ನು ಪೂರೈಸಿದ್ದು, ಮಹಾಲೇಖಪಾಲರು, ಬೆಂಗಳೂರು ಇವರ ಪತ್ರ ದಿನಾಂಕ: 01–08–2007ರಲ್ಲಿ ಕೋರಿರುವಂತೆ ಇವರ ಹಿಂದಿನ ಸೇವೆಯನ್ನು ಪಿಂಚಣಿ ಸಲುವಾಗಿ ಪರಿಗಣಿಸುವ ಕುರಿತು ಕಂದಾಯ ಇಲಾಖೆಯಿಂದ ಸೂಕ್ತ ಆದೇಶ ಹೊರಡಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಬೆಳಗಾವಿ ಜಿಲ್ಲೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಕಂಕಷವಾಗಿ ಪರಿಶೀಲಿಸಿ ಶ್ರೀಯುತರ ಮೂಲ ಸೇವೆ ಪುಸ್ತಕದಲ್ಲಿ ದಾಖಲಿಸಿರುವಂತೆ ಶ್ರೀ ವ್ಹಿ.ಪಿ. ಕಾಂಬಳೆ, ನಿವೃತ್ತ ತಹಶೀಲ್ದಾರ್ ಖಾನಾಪುರ ಇವರ ಈ ಹಿಂದೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ, ಸಹ ಶಿಕ್ಷಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ: 30–05–1974 ರಿಂದ 10–12–1977 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 328 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2008**

ಮೇಲೆ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ವ್ಹಿ.ಪಿ.ಕಾಂಬಳೆ, ನಿವೃತ್ತ ತಹಶೀಲ್ದಾರ್, ಖಾನಾಪುರ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ: 30–05–1974 ರಿಂದ 10–12–1977 ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ 7–8) ರವರ ಟಿಪ್ಪಣಿ ಸಂ: ಆಇ 1569 ವೆಚ್ಚ–7/2008, ದಿನಾಂಕ: 23–12–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.162

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಸುರೇಶ್‌ಜಿರ್ಲಿ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ ಜಿಲ್ಲೆ ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪ್ರಸ್ತಾವನೆ ಸಂ: ಕಂದಾಯ:ಸಿಬ್ಬಂದಿ–2:2004–05, ದಿನಾಂಕ:08–12–2004
2) ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ಇವರ ಪ್ರಸ್ತಾವನೆ ಸಂ: ಸಿಬ್ಬಂದಿ–1/ ವಹಿ–122/2007–08, ದಿನಾಂಕ: 27–02–2008, 07–08–2008.
3) ಮಹಾಲೇಖಪಾಲರು (ಎ&ಇ), ಇವರ ಪತ್ರ ಸಂ: GE1/R-4/Vol-423/04-05/623, Dt: 3–11–2004.
4) ಸರ್ಕಾರದ ಆದೇಶ ಸಂ: ಆರ್‌ಡಿ 315 ಎಎಸ್‌ಡಿ 2008, ದಿನಾಂಕ: 05–08–2008.

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಕೊಪ್ಪಳ ಹಾಗೂ ಗದಗ್ ಜಿಲ್ಲೆ ಇವರ ಪ್ರಸ್ತಾವನೆಗಳಲ್ಲಿ ಶ್ರೀ ಸುರೇಶ್‌ಜಿರ್ಲಿ, ಚುನಾವಣಾ ತಹಶೀಲ್ದಾರ್, ಗದಗ್ ಜಿಲ್ಲೆ ಇವರು ವೇತನ ಶ್ರೇಣಿ ರೂ. 6,000–11,200 (ಹಿಂದಿನ ವೇತನ ಶ್ರೇಣಿ) ರಲ್ಲಿ ದಿನಾಂಕ: 01–10–2001 ರಿಂದ ಗರಿಷ್ಠ ಹಂತ ತಲುಪಿರುವುದರಿಂದ ದಿನಾಂಕ: 01–10–2002ರಿಂದ ಅನ್ವಯವಾಗುವಂತೆ 5 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಪ್ರಸ್ತಾಪಿಸಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ದಿನಾಂಕ: 3–11–2004ರ ವರದಿಯಲ್ಲಿ ದಿನಾಂಕ: 1–10–2002ರಿಂದ

ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿರುತ್ತಾರೆ. ಅದರಂತೆ, ಮೇಲೆ ಓದಲಾದ ಕ್ರ.ಸಂ: (4) ದಿನಾಂಕ: 5–8–2008ರ ಆದೇಶದಲ್ಲಿ ಒಟ್ಟು ಮೂರು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಲಾಗಿರುತ್ತದೆ.

ಸರ್ಕಾರವು ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ದಿನಾಂಕ: 07–08–2008ರ ಮತ್ತು ಮಹಾಲೇಖಪಾಲರು ಕರ್ನಾಟಕ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ರೂ. 11,400–21,600 ವೇತನ ಶ್ರೇಣಿಯಲ್ಲಿ ದಿನಾಂಕ: 01–10–2005 ರಿಂದ ಅನ್ವಯವಾಗುವಂತೆ ಬಾಕಿ ಇರುವ ಎರಡು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 315 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಸುರೇಶ್‌ಜಿರ್ಲಿ, ಚುನಾವಣಾ ತಹಶೀಲ್ದಾರ್, ಗದಗ್ ಜಿಲ್ಲೆ, ಇವರಿಗೆ ವೇತನ ಶ್ರೇಣಿ ರೂ. 11,400–21,600 ರಲ್ಲಿ ಈ ಕೆಳಕಂಡ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

1) ದಿನಾಂಕ: 01–10–2005 ರಿಂದ ನಾಲ್ಕನೇ ಸ್ಥಗಿತ ವೇತನ ಬಡ್ತಿ
2) ದಿನಾಂಕ: 01–10–2006 ರಿಂದ ಐದನೇ ಸ್ಥಗಿತ ವೇತನ ಬಡ್ತಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.197

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕುಂಬಳಗೂಡು, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂಬರ್ 40ರ ಸರ್ಕಾರಿ ಭೂಮಿಯಲ್ಲಿ 12.00 ಎಕರೆ ವಿಸ್ತೀರ್ಣವನ್ನು ಅಕ್ರಮವಾಗಿ ಮಂಜೂರು ಮಾಡಿರುವ ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತ) ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ಬಗ್ಗೆ ಆದೇಶ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರ ಪ್ರಸ್ತಾವನೆ ಸಂಖ್ಯೆ: ಸಿಬ್ಬಂದಿ(2): ಸಿಆರ್ 90/ 2005–06, ದಿನಾಂಕ:26–12–2005.
2) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 64 ಎಡಿಇ 2005, ದಿನಾಂಕ: 28–12–2005.
3) ಶ್ರೀ ವಿ. ನಾರಾಯಣಸ್ವಾಮಿ, ನಿವೃತ್ತ ತಹಶೀಲ್ದಾರ್ ಇವರ ರಕ್ಷಣಾ ಹೇಳಿಕೆ ದಿನಾಂಕ: 30–01–2006.
4) ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಪ್ರಸ್ತುತ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ರಕ್ಷಣಾ ಹೇಳಿಕೆ ದಿನಾಂಕ: 30–01–2006.
5) ಶ್ರೀ ದೊಡ್ಡೇಗೌಡ, ಸೂಪರ್‌ವೈಸರ್, ಇವರ ರಕ್ಷಣಾ ಹೇಳಿಕೆ ದಿನಾಂಕ:30–01–2006.
6) ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ಇವರ ರಕ್ಷಣಾ ಹೇಳಿಕೆ ದಿನಾಂಕ: 30–01–2006.
7) ಶ್ರೀ ಹೆಚ್.ವಿ. ಸತ್ಯನಾರಾಯಣ, ಗ್ರಾಮಲೆಕ್ಕಿಗರು, ಕೆ. ಗೊಲ್ಲಹಳ್ಳಿ ವೃತ್ತ, ಇವರ ರಕ್ಷಣಾ ಹೇಳಿಕೆ ದಿನಾಂಕ: 5/7–01–2006.
8) ಶ್ರೀ ಲಕ್ಷ್ಮೀನಾರಾಯಣ, ಗ್ರಾಮಲೆಕ್ಕಿಗ, ಆನೇಕಲ್ ತಾಲ್ಲೂಕು, ಇವರ ರಕ್ಷಣಾ ಹೇಳಿಕೆ ದಿನಾಂಕ: 3–01–2006.
9) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಬರೆದ ಸಮ ಸಂಖ್ಯೆಯ ದಿನಾಂಕ: 8–6–2006ರ ಪತ್ರ.
10) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ:ಸಿಸಿಎ 2:ಸಿಆರ್:90/2005–06, ದಿನಾಂಕ: 31–10–2006.
11) ಸರ್ಕಾರದ ಆದೇಶ ಸಂ: ಆರ್‌ಡಿ 64 ಎಡಿಇ 2005, ದಿನಾಂಕ: 09–03–2007.
12) ವಿಚಾರಣಾಧಿಕಾರಿಗಳ ವರದಿ ದಿನಾಂಕ: 25–11–2008.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 26–12–2005ರ ಪ್ರಸ್ತಾವನೆಯಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರು ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕುಂಬಳಗೂಡು, ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂಬರ್ 40ರ ಸರ್ಕಾರಿ ಗೋಮಾಳದ ಜಮೀನಿನಲ್ಲಿ (1) ಆರ್. ಸುರೇಶ್ ಬಿನ್ ಹೆಚ್. ರಮೇಶ್, (2) ಶ್ರೀ ಎಂ. ಮಂಜುನಾಥ್, ಬಿನ್ ಮಹಲಿಂಗಪ್ಪ, (3) ಶ್ರೀಮತಿ ಎಂ.ಎಸ್. ರಾಜೇಶ್ವರಿ ಬಿನ್ ಎಂ.ಎಸ್. ಶಿವರಾಮಯ್ಯ ಇವರಿಗೆ ತಲಾ 4–00 ಎಕರೆಯಂತೆ ಒಟ್ಟು 12.00 ಎಕರೆ ವಿಸ್ತೀರ್ಣವನ್ನು ನಮೂನೆ 53ರಲ್ಲಿ ಅರ್ಜಿ ಸ್ವೀಕರಿಸಿ, ನಿಯಮಬಾಹಿರವಾಗಿ ಮಂಜೂರು ಮಾಡಿ ಭೂ ಕಂದಾಯ

ನಿಯಮ 1964 ನಿಯಮ 108(ಸಿ), 108 (ಡಿ) (i) (ii) (iii) ಉಲ್ಲಂಘನೆಯಾಗಿರುವುದಾಗಿ ಈ ಪ್ರಕರಣದಲ್ಲಿ ಈ ಕೆಳಕಂಡ ಅಧಿಕಾರಿ/ ನೌಕರರು ಬಾಗಿಯಾಗಿದ್ದು, ಸದರಿಯವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆ ನಡೆಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1. ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು
2. ಶ್ರೀ ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ನಿವೃತ್ತ).
3. ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ರಾಮಚಂದ್ರಪುರ ವೃತ್ತ, ಬೆಂಗಳೂರು ಉತ್ತರ ತಾಲ್ಲೂಕು (ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ)
4. ಶ್ರೀ ಹೆಚ್.ವಿ. ಸತ್ಯನಾರಾಯಣ, ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ,
5. ಶ್ರೀ ಲಕ್ಷ್ಮೀನಾರಾಯಣ, ಗ್ರಾಮಲೆಕ್ಕಿಗ, ಆನೇಕಲ್, (ಹಿಂದಿನ ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ ವೃತ್ತ).
6. ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ಬೆಂಗಳೂರು ಉತ್ತರ ತಾಲ್ಲೂಕು, ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು.

ಸರ್ಕಾರವು ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಜಿಲ್ಲಾಧಿಕಾರಿಗಳು ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಆಪಾದಿತರೆನ್ನಲಾದ ಮೇಲಿನ ಕಂಡಿಕೆಯಲ್ಲಿ ತಿಳಿಸಿರುವ ಕ್ರ.ಸಂ. (1) ರಿಂದ (6) ರ ವರೆಗಿನ ಅಧಿಕಾರಿ/ ನೌಕರರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 13ರ ಅನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲು, ನಿಯಮ 11ರಡಿಯಲ್ಲಿ ಕಾರಣ ಕೇಳುವ ನೋಟಿಸನ್ನು ಅನುಬಂಧ 1 ರಿಂದ 4ರವರೆಗೆ ಜಾರಿಗೊಳಿಸಿ ದೋಷಾರೋಪಣೆಗೆ ಸಂಬಂಧಿಸಿದಂತೆ, ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಿತ್ತು.

ಸದರಿ ದೋಷಾರೋಪಣಾ ಪಟ್ಟಿಗೆ ಸಂಬಂಧಿಸಿದಂತೆ ಕ್ರ.ಸಂ. (1) ರಿಂದ (6)ರ ವರೆಗಿನ ಅಧಿಕಾರಿಗಳು ಮೇಲೆ ಓದಲಾದ ಕ್ರ.ಸಂ.(3) ರಿಂದ (8)ರ ವರೆಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ರಕ್ಷಣಾ ಹೇಳಿಕೆಗಳನ್ನು ಮತ್ತು ಆಪಾದಿತ ಅಧಿಕಾರಿ/ನೌಕರರು ಸಲ್ಲಿಸಿದ್ದ ದಾಖಲೆಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಕಳುಹಿಸಿ ಉತ್ತರದಲ್ಲಿರುವ ಅಂಶಗಳನ್ನು ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮೇಲೆ ಓದಲಾದ ಕ್ರ.ಸಂ.(9)ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ತಮ್ಮ ಅಭಿಪ್ರಾಯದ ವರದಿಯನ್ನು ಮೇಲೆ ಓದಲಾದ ಕ್ರ.ಸಂ. (10)ರ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ನೀಡಿರುವ ರಕ್ಷಣಾ ಹೇಳಿಕೆಯನ್ನು ಹೊರತುಪಡಿಸಿ, ಉಳಿದ ಆರೋಪಿತ ಅಧಿಕಾರಿ/ ನೌಕರರು ಸಲ್ಲಿಸಿರುವ ಉತ್ತರ ಮತ್ತು ದಾಖಲೆಗಳನ್ನು ಒಪ್ಪುವಂತಹ ಯಾವುದೇ ಸಮಜಾಯಿಷಿ ಹಾಗೂ ಸಮರ್ಥನೆ ಮಾಡುವಂತೆ ಯಾವುದೇ ದಾಖಲಾತಿಗಳು ಇಲ್ಲದಿರುವುದರಿಂದ ಆಪಾದಿತ ಅಧಿಕಾರಿಗಳಾದ ಶ್ರೀ ವಿ. ನಾರಾಯಣಸ್ವಾಮಿ, ನಿವೃತ್ತ ಹಿಂದಿನ ತಹಶೀಲ್ದಾರ್, ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ತಾಲ್ಲೂಕು ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು (ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು), ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು (ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ, ಕೆಂಗೇರಿ ಹೋಬಳಿ), ಶ್ರೀ ಲಕ್ಷ್ಮೀನಾರಾಯಣ, ಗ್ರಾಮಲೆಕ್ಕಿಗ, ತಾಲ್ಲೂಕು ಕಛೇರಿ, ಆನೇಕಲ್, ಶ್ರೀ ಸತ್ಯನಾರಾಯಣ, ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿದೆ. ಹಾಗೂ ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ)ಇವರು ಇವರು ಲಿಖಿತ ಹೇಳಿಕೆಯಲ್ಲಿ ಅರ್ಜಿದಾರರಾದ ಶ್ರೀ ಆರ್. ಸುರೇಶ್, ಶ್ರೀ ಮಂಜುನಾಥ್, ಶ್ರೀಮತಿ ರಾಜೇಶ್ವರಿ ಇವರುಗಳು ಕರ್ನಾಟಕ ಭೂ ಕಂದಾಯ ಕಾಯ್ದೆ ನಿಯಮ 108 (ಸಿ)(i) ರಡಿ ದಿನಾಂಕ 24–6–1999ರಂದು ಫಾರಂ 53 ಸೆಕ್ಷನ್ 94(ಬಿ)ರಂತೆ ಸಲ್ಲಿಸಿರುವ ಅರ್ಜಿಗಳನ್ನು ಗ್ರಾಮಲೆಕ್ಕಿಗರು, ರಾಜಸ್ವ ನಿರೀಕ್ಷಕರು ಮತ್ತು ಮೋಜಣಿದಾರರು ದಾಖಲಾತಿಗಳೊಂದಿಗೆ ಕಡತ ಸಲ್ಲಿಸಿರುತ್ತಾರೆ. ವಿಷಯ ನಿರ್ವಾಹಕರು ಶಿರಸ್ತೇದಾರರು ದಾಖಲಾತಿಗಳನ್ನು ಪರಿಶೀಲಿಸಿ ಸದರಿ ಅರ್ಜಿಗಳು ತಾಲ್ಲೂಕು ಕಛೇರಿಯಲ್ಲಿ ಫಾರಂ 51ರ ವಹಿಯಲ್ಲಿ ದಾಖಲಾತಿ ಇದ್ದುದರಿಂದ ಈ ದಾಖಲೆಗಳನ್ನು ದೃಢೀಕರಿಸದೇ ತಹಶೀಲ್ದಾರರೇ ಸಮಿತಿಯ ಕಾರ್ಯದರ್ಶಿಯಾಗಿದ್ದು, ಸಮಿತಿಯ ನಡವಳಿ ಕ್ರ.ಸಂ. 16ರಂತೆ ಸದರಿ ವಿಚಾರವನ್ನು ಸಮಿತಿಯ ಮುಂದೆ ಮಂಡಿಸಲಾಗಿದೆ. ಸಮಿತಿಯು ಈ ವಿಚಾರ'ವನ್ನು ಉಲ್ಲೇಖಿಸಿ ಸಮಿತಿಯ ಕಾರ್ಯದರ್ಶಿಗಳು ಖುದ್ದು ಪರಿಶೀಲಿಸಿ ಕಾನೂನು ರೀತಿಯಲ್ಲಿ ಕ್ರಮ ಕೈಗೊಳ್ಳಲು ಸೂಚಿಸಿರುತ್ತಾರೆ. ನಂತರ, ತಾವು ವರ್ಗಾವಣೆಯಾಗಿದ್ದು, ನಂತರ ಬಂದ ತಹಶೀಲ್ದಾರರು ಸಮಿತಿಯ ಒಪ್ಪಿಗೆಯನ್ನು ಪಡೆಯದೇ ಸಾಗುವಳಿ ಚೀಟಿ ವಿತರಿಸಿರುವುದು ಕಾನೂನು ಉಲ್ಲಂಘನೆಯಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಈ ಅಂಶಗಳನ್ನು ಪರಿಶೀಲಿಸಿದಾಗ ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಇವರು ಸಮಿತಿಯ ಕಾರ್ಯದರ್ಶಿಗಳಾಗಿ ಖುದ್ದು ಪರಿಶೀಲಿಸಿ ನಿರ್ಣಯ ಕೈಗೊಳ್ಳುವ ಹಂತದಲ್ಲಿ ವರ್ಗಾವಣೆಯಾಗಿರುವುದರಿಂದ ಹಾಗೂ ಸಕ್ರಮ ಕೋರಿರುವ ಅರ್ಜಿಗಳ ಬಗ್ಗೆ ಯಾವುದೇ

ತೀರ್ಮಾನ ಕೈಗೊಂಡಿಲ್ಲದ ಕಾರಣ ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಹಾಲಿ ಶಾಖಾಧಿಕಾರಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ರಕ್ಷಣಾ ಹೇಳಿಕೆಯನ್ನು ಒಪ್ಪಿಕೊಂಡು ಇವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆಪಾದನೆಯಿಂದ ಮುಕ್ತಗೊಳಿಸಲು ತೀರ್ಮಾನಿಸಿದೆ.

ಶ್ರೀ ರಾಮಚಂದ್ರ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರನ್ನು ಹೊರತುಪಡಿಸಿ, ಉಳಿದ ಅಧಿಕಾರಿ/ನೌಕರರು ನೀಡಿರುವ ಸಮಜಾಯಿಷಿಯನ್ನು ಸಮರ್ಥನೆ ಮಾಡುವಂತ ಕಾರಣಗಳು ಮತ್ತು ದಾಖಲಾತಿಗಳು ಇಲ್ಲದಿರುವುದರಿಂದ, ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರನ್ನು ಮೇಲೆ ಓದಲಾದ ಕ್ರ.ಸಂ (11)ರ ದಿನಾಂಕ:09–03–2007ರಲ್ಲಿ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಈ ಪ್ರಕರಣದ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಮೇಲೆ ಓದಲಾದ ಕ್ರ.ಸಂ: (12) ದಿನಾಂಕ: 25–11–2008ರಲ್ಲಿ ಸಲ್ಲಿಸಿ, ಈ ಕೆಳಗಿನಂತೆ, ನಿರ್ಣಯಿಸಿರುತ್ತಾರೆ.

1) ವಿ. ನಾರಾಯಣಸ್ವಾಮಿ, ಹಿಂದಿನ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ನಿವೃತ್ತ) – ಇವರ ವಿರುದ್ಧ ಆಪಾದನೆಗಳು ರುಜುವಾತಾಗಿರುತ್ತದೆ.
2) ಶ್ರೀ ಗವೀಗೌಡ, ರಾಜಸ್ವ ನಿರೀಕ್ಷಕರು, ರಾಮಚಂದ್ರಪುರ ವೃತ್ತ, ಬೆಂಗಳೂರು ಉತ್ತರ ತಾಲ್ಲೂಕು (ಹಿಂದಿನ ರಾಜಸ್ವ ನಿರೀಕ್ಷಕರು, ಹೆಮ್ಮಿಗೆಪುರ ವೃತ್ತ)–ರುಜುವಾತಾಗಿರುವುದಿಲ್ಲ.
3) ಶ್ರೀ ಹೆಚ್.ವಿ. ಸತ್ಯನಾರಾಯಣ, ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ– ಸಾಬೀತಾಗಿರುವುದಿಲ್ಲ.
4) ಶ್ರೀ ಲಕ್ಷ್ಮೀನಾರಾಯಣ, ಗ್ರಾಮಲೆಕ್ಕಿಗ, ಆನೇಕಲ್, (ಹಿಂದಿನ ಗ್ರಾಮಲೆಕ್ಕಿಗ, ಕೆ. ಗೊಲ್ಲಹಳ್ಳಿ ವೃತ್ತ)– ರುಜುವಾತಾಗಿರುವುದಿಲ್ಲ.
5) ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ಬೆಂಗಳೂರು ಉತ್ತರ ತಾಲ್ಲೂಕು, ಹಿಂದಿನ ತಾಲ್ಲೂಕು ಮೋಜಣಿದಾರರು, ಬೆಂಗಳೂರು ದಕ್ಷಿಣ ತಾಲ್ಲೂಕು– ರುಜುವಾತಾಗಿರುವುದಿಲ್ಲ.

ಮೇಲೆ ಕಾಣಿಸಿದಂತೆ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಒಪ್ಪಿ, ಶ್ರೀ ಗವೀಗೌಡ, ಶ್ರೀ ಹೆಚ್.ವಿ. ಸತ್ಯನಾರಾಯಣ, ಶ್ರೀ ಲಕ್ಷ್ಮೀನಾರಾಯಣ, ಶ್ರೀ ದೊಡ್ಡೇಗೌಡ ಇವರುಗಳ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿಲ್ಲದ ಕಾರಣ, ಸದರಿ ನೌಕರರನ್ನು ಆರೋಪಗಳಿಂದ ಮುಕ್ತಗೊಳಿಸಲು ಹಾಗೂ ಶ್ರೀ ವಿ.ನಾರಾಯಣಸ್ವಾಮಿ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಆಪಾದನೆಗಳು ಸಾಬೀತಾಗಿರುವುದರಿಂದ ಇವರಿಗೆ ಪ್ರತ್ಯೇಕವಾಗಿ ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 64 ಎಡಿಇ 2005, ಬೆಂಗಳೂರು, ದಿನಾಂಕ: 07ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಟಿ.ಎಸ್.ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ ಜಂಟಿ ಇಲಾಖಾ ವಿಚಾರಣಾ ವರದಿಯನ್ವಯ ಸರ್ಕಾರವು ಒಪ್ಪಿ (1) ಶ್ರೀ ದೊಡ್ಡೇಗೌಡ, ಪರಿವೀಕ್ಷಕರು, ತಾಲ್ಲೂಕು ಕಛೇರಿ, ಬೆಂ. ಉತ್ತರ ತಾಲ್ಲೂಕು, (2) ಶ್ರೀ ವಿ. ಗವೀಗೌಡ, ಹಿಂದಿನ ರಾಜಸ್ವ ನಿರೀಕ್ಷಕರು (ಪ್ರಸ್ತುತ ನಿವೃತ್ತರು), ಬೆಂಗಳೂರು ಉತ್ತರ (ಅಪರ) ತಾಲ್ಲೂಕು, (3) ಶ್ರೀ ಲಕ್ಷ್ಮೀನಾರಾಯಣ, ಹಿಂದಿನ ಗ್ರಾಮಲೆಕ್ಕಿಗರು, ತಾಲ್ಲೂಕು ಕಛೇರಿ, ಆನೇಕಲ್, (ಪ್ರಸ್ತುತ ಗ್ರಾಮಲೆಕ್ಕಿಗರು, ಬೆಂಗಳೂರು ಉತ್ತರ ತಾಲ್ಲೂಕು), (4) ಶ್ರೀ ಹೆಚ್.ವಿ.ಸತ್ಯನಾರಾಯಣ, ಹಿಂದಿನ ಗ್ರಾಮಲೆಕ್ಕಿಗರು, ಕೆ.ಗೊಲ್ಲಹಳ್ಳಿ (ಪ್ರಸ್ತುತ ಗ್ರಾಮಲೆಕ್ಕಿಗರು, ಆನೇಕಲ್ ತಾಲ್ಲೂಕು) ಇವರುಗಳನ್ನು ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 64 ಎಡಿಇ 2005, ದಿನಾಂಕ: 28–12–2005ರಲ್ಲಿ ಹೊರಿಸಲಾದ ಆಪಾದನೆಯಿಂದ ಸರ್ಕಾರವು ದೋಷಮುಕ್ತಗೊಳಿಸಿ ಆದೇಶಿಸಿದೆ.

ಹಾಗೂ ಶ್ರೀ ನಾರಾಯಣಸ್ವಾಮಿ.ವಿ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಹೊರಿಸಲಾದ ಆಪಾದನೆಗಳು ಸಾಬೀತಾಗಿರುವುದರಿಂದ ಇವರಿಗೆ ಕೆಸಿಎಸ್‌ಆರ್ ನಿಯಮ 214ರಲ್ಲಿ ದಂಡನೆ ವಿಧಿಸುವ ಬಗ್ಗೆ ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.299

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಶಿವಪ್ಪ, ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಧಾರವಾಡ ಜಿಲ್ಲಾಧಿಕಾರಿಯವರ ಅ.ಸ.ಪತ್ರ ಸಂಖ್ಯೆ:ಸಿಬ್ಬಂದಿ:1/ಇವಿ/ವಹಿ/8/2004–05, ದಿನಾಂಕ: 6–1–2005.
2) ಧಾರವಾಡ ಜಿಲ್ಲಾಧಿಕಾರಿಯವರ ಪತ್ರದ ಸಂ: ಕ್ರ: ಸಿಬ್ಬಂದಿ:1:ಇವಿ: ವಹಿ:8/ 2004–05, ದಿನಾಂಕ: 8–7–2005.
3) ಕಾರಣ ಕೇಳುವ ನೋಟೀಸು ಸಂ: ಆರ್.ಡಿ 77 ಎಡಿಇ 2004, ದಿನಾಂಕ: 21–12–2005.

4) ಲಿಖಿತ ಹೇಳಿಕೆ:
   1) ಶ್ರೀ ಶಿವಪ್ಪ, ಹಾನಗಲ್, ದಿನಾಂಕ: 24-2-2006.
   2) ಶ್ರೀ ಎಸ್.ಎಂ. ದಾನಣ್ಣವರ, ದಿನಾಂಕ: 8-2-2006.
   3) ಶ್ರೀ ಝೆಡ್.ಎಂ. ಕಾಲೇಮದಾರ್, ದಿನಾಂಕ: 4-7-2006.
5) ಸರ್ಕಾರದ ಆದೇಶ ಸಂ: ಆರ್‌ಡಿ 77 ಎಡಿಇ 2004, ದಿನಾಂಕ: 21-09-2007.
6) ವಿಚಾರಣಾಧಿಕಾರಿಗಳ ವರದಿ ದಿನಾಂಕ: 16-06-2008.
7) ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ: 22-10-2008.
8) ಶ್ರೀ ಎಸ್.ಎಂ. ದಾನಣ್ಣವರ್, ಕಂದಾಯ ನಿರೀಕ್ಷಕರು ಇವರ ಲಿಖಿತ ಸಮಜಾಯಿಷಿ ದಿನಾಂಕ: 28-11-2008.
9) ಶ್ರೀ ಝೆಡ್.ಎಂ. ಕಾಲೇಮದಾರ, ನಿವೃತ್ತ ಕಂದಾಯ ನಿರೀಕ್ಷಕರು ಇವರ ಲಿಖಿತ ಸಮಜಾಯಿಷಿ ದಿನಾಂಕ: 28-11-2008.

**ಪ್ರಸ್ತಾವನೆ:**

ಧಾರವಾಡ ಜಿಲ್ಲೆ, ಕುಂದಗೋಳ ತಾಲ್ಲೂಕು ಕಛೇರಿಯಲ್ಲಿ ವೃದ್ಯಾಪ್ಯ ವೇತನ, ಅಂಗವಿಕಲ ಮಾಸಾಶನ, ವಿಧವಾ ವೇತನಕ್ಕೆ ಸಂಬಂಧಿಸಿದ ಪ್ರಕರಣಗಳು, ಹಕ್ಕು ದಾಖಲಾತಿಗಳಿಗೆ ಸಂಬಂಧಿಸಿದ ಪ್ರಕರಣಗಳು ಹಾಗೂ ಗಣಕೀಕರಣ ವಿಭಾಗದಲ್ಲಿ ಬಾಕಿ ಇರುವ ಹಕ್ಕು ದಾಖಲಾತಿ ಪ್ರಕರಣಗಳನ್ನು ಇತ್ಯರ್ಥಗೊಳಿಸುವ ಬಗ್ಗೆ ಈ ಕೆಳಕಂಡ ಅಧಿಕಾರಿ / ನೌಕರರು ಶೀಘ್ರವಾಗಿ ವಿಲೇವಾರಿ ಮಾಡದೇ ವಿಳಂಬ ಮಾಡಿ ಕರ್ತವ್ಯ ಲೋಪ ಎಸಗಿರುವುದರಿಂದ ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರ.ಸಂ. (1) ಮತ್ತು (2)ರಲ್ಲಿ ಓದಲಾದ ಪತ್ರಗಳಲ್ಲಿ ಧಾರವಾಡ ಜಿಲ್ಲಾಧಿಕಾರಿಯವರು ಅವರುಗಳಿಗೆ ಸಂಬಂಧಿಸಿದ ಆರೋಪ ಪಟ್ಟಿಗಳೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

1. ಶ್ರೀ ಶಿವಪ್ಪ, ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ.
2. ಶ್ರೀ ಎಸ್.ಎಂ. ದಾನಣ್ಣವರ, ಹಿಂದಿನ ಕಂದಾಯ ನಿರೀಕ್ಷಕರ, ಸಂಶಿ.
3. ಶ್ರೀ ಝೆಡ್.ಎಂ. ಕಾಲೇಮದಾರ್, ಹಿಂದಿನ ಕಂದಾಯ ನಿರೀಕ್ಷಕ (ಈಗ ನಿವೃತ್ತರು), ಕುಂದಗೋಳ ತಾಲ್ಲೂಕು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರಡಿಯಲ್ಲಿ ಮೇಲ್ಕಂಡ ಪತ್ರದಲ್ಲಿ ಪ್ರಸ್ತಾಪಿಸಲಾಗಿರುವ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿ/ನೌಕರರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿನಾಂಕ: 21-12-2005ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು. ಕ್ರ.ಸಂ. (4)ರಲ್ಲಿ ಓದಲಾದ ಪತ್ರಗಳಲ್ಲಿ ಶ್ರೀ ಶಿವಪ್ಪ ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ ಶ್ರೀ ಎಸ್.ಎಮ್. ದಾನಣ್ಣವರ್, ಹಿಂದಿನ ಕಂದಾಯ ನಿರೀಕ್ಷಕ, ಸಂಶಿ ಮತ್ತು ಶ್ರೀ ಝೆಡ್.ಎಂ. ಕಾಲೇಮದಾರ್, ಹಿಂದಿನ ಕಂದಾಯ ನಿರೀಕ್ಷಕ (ಈಗ ನಿವೃತ್ತರು), ಕುಂದಗೋಳ, ಇವರುಗಳು ತಮ್ಮ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ.

ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ/ ನೌಕರರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಶ್ರೀ ಸೋಸಲೆ ಇಂದುಧರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ಮೇಲೆ ಓದಲಾದ ಕ್ರ.ಸಂ: (5), ದಿನಾಂಕ: 21-9-2007ರಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ದಿನಾಂಕ: 16-06-2008ರಲ್ಲಿ ಸಲ್ಲಿಸಿ, ಈ ಕೆಳಕಂಡಂತೆ ನಿರ್ಣಯಿಸಿರುತ್ತಾರೆ.

1. ಶ್ರೀ ಶಿವಪ್ಪ ಹಾನಗಲ್, ನಿವೃತ್ತ ತಹಶೀಲ್ದಾರ್-ಇವರ ವಿರುದ್ಧ 6 ಆಪಾದನೆಗಳು ರುಜುವಾತಾಗಿರುವುದಿಲ್ಲ.
2. ಶ್ರೀ ಎಸ್.ಎಂ. ದಾನಣ್ಣವರ್, ಕಂದಾಯ ನಿರೀಕ್ಷಕರು-ಇವರ ವಿರುದ್ಧ ಆಪಾದನೆ ಭಾಗಶ: ರುಜುವಾತಾಗಿರುತ್ತದೆ.
3. ಶ್ರೀ ಝೆಡ್.ಎಂ. ಕಾಲೇಮದಾರ್, ನಿವೃತ್ತ ಕಂ. ನಿರೀಕ್ಷಕರು-ಇವರ ವಿರುದ್ಧ ಆಪಾದನೆ ಭಾಗಶ: ರುಜುವಾತಾಗಿರುತ್ತದೆ.

ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವಿಚಾರಣಾ ವರದಿಯನ್ವಯ, ಮೇಲ್ಕಂಡ ಆರೋಪಿತ ನೌಕರರಾದ ಶ್ರೀ ಎಸ್.ಎಂ.ದಾನಣ್ಣವರ್ ಹಾಗೂ ಶ್ರೀ ಝೆಡ್.ಎಂ.ಕಾಲೇಮದಾರ್ ಇವರುಗಳಿಗೆ ಎರಡನೇ ಕಾರಣ ಕೇಳುವ ನೋಟೀಸನ್ನು ಮೇಲೆ ಓದಲಾದ ಕ್ರ.ಸಂ: (7) ದಿನಾಂಕ: 22-10-2008ರಲ್ಲಿ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಎಸ್.ಎಂ.ದಾನಣ್ಣವರ್ ಹಾಗೂ ಶ್ರೀ ಝೆಡ್.ಎಂ.ಕಾಲೇಮದಾರ್ ಇವರುಗಳು ತಮ್ಮಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುತ್ತಾ ತಮ್ಮ ವಿರುದ್ಧದ ಭಾಗಶ: ರುಜುವಾತಾಗಿರುವ ಆರೋಪ ಕುರಿತು ಸರ್ಕಾರದ ಸುತ್ತೋಲೆ ಸಂ: ಕಂಇ 28 ಎಂ.ಆರ್.ಆರ್. 2001, ದಿನಾಂಕ: 05-02-2001ರಲ್ಲಿ ಭೂಮಿ ಸಾಫ್ಟ್‌ವೇರ್ ಬಳಕೆ ಕಾರ್ಯ ನಿರ್ವಹಣೆ ಮಾರ್ಗಸೂಚಿಯ

9ನೇ ಪ್ಯಾರಾದ ಪ್ರಕಾರ ಹಕ್ಕು ಬದಲಾವಣೆ ಕುರಿತು ಬಂದ ಅರ್ಜಿಗಳು ಸಂಬಂಧಪಟ್ಟ ಗ್ರಾಮಲೆಕ್ಕಿಗರು, ಕಂಪ್ಯೂಟರ್ ಆಪರೇಟರ್ ವಿಭಾಗದಿಂದ ಪಡೆದು ಬದಲಾವಣೆ ಪ್ರಕ್ರಿಯೆ ಕೈಗೊಂಡು ಅಂದರೆ ಸಂಬಂಧಪಟ್ಟವರಿಗೆ ನೋಟೀಸು ನೀಡುವುದು ಮತ್ತು 30 ದಿನಗಳವರೆಗೆ ಕಾದು ಆನಂತರ ರಾಜಸ್ವ ನಿರೀಕ್ಷಕರು, ಹಕ್ಕು ಬದಲಾವಣೆ ಆದೇಶ ಹೊರಡಿಸಬೇಕಾಗುತ್ತದೆ ಎಂದು ಈ ಪ್ರಕ್ರಿಯೆಯಲ್ಲಿ ಗ್ರಾಮಲೆಕ್ಕಿಗರಿಂದ ಸಾಕಷ್ಟು ವಿಳಂಬವಾಗುವ ಸಾಧ್ಯತೆಯನ್ನು ಅಲ್ಲಗೆಳೆಯುವ ಸಾಧ್ಯತೆ ಇಲ್ಲವಾದ್ದರಿಂದ ಈ ಬಗ್ಗೆ ರಾಜಸ್ವ ನಿರೀಕ್ಷಕರು ಮಾತ್ರ ಹೊಣೆಗಾರರಾಗುವುದಿಲ್ಲವೆಂದು ಹಾಗೂ ದಿನಾಂಕ: 29–10–2004ರ ಗಣಕೀಕರಣದಲ್ಲಿ ಬಾಕಿ ಇರುವ ಪಟ್ಟಿಯನ್ನು ಅವಲೋಕಿಸಲಾಗಿ, ರಾಜಸ್ವ ನಿರೀಕ್ಷಕರು, ಕುಂದಗೋಳ್ ಇವರ ವಲಯದಲ್ಲಿ ಕೇವಲ 14–15 ಪ್ರಕರಣಗಳು ಮಾತ್ರ ಬಾಕಿ ಇರುವುದು ಕಂಡು ಬರುತ್ತದೆ ಎಂದು ಆಪಾದಿತರಾದ ತಮ್ಮಗಳ ಮೇಲೆ ಹೊರಸಿರುವ ಆಪಾದನೆಗಳ ವೃದ್ದಾಪ್ಯ ವೇತನ, ವಿಧವಾ ವೇತನ, ಹಕ್ಕು ಬದಲಾವಣೆ ವಿಲೇವಾರಿಯಲ್ಲಿ ವಿಳಂಬವಾಗಿರುವ ಬಗ್ಗೆ ಹೆಚ್ಚಿನ ಪ್ರಕರಣಗಳು ಇಲಾಖಾ ವಿಚಾರಣೆಯಲ್ಲಿ ಕಂಡು ಬರದೇ ಕೇವಲ 14–15 ಪ್ರಕರಣಗಳು ಮಾತ್ರ ಬಾಕಿ ಇರುವುದಾಗಿ ಕಂಡು ಬಂದಿದ್ದು, ಇಂತಹ ವಿಳಂಬಕ್ಕೆ ದಂಡನೆ ವಿಧಿಸುವುದು ಸಮಂಜಸವಾಗಿ ಕಂಡುಬರುವುದಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಅವರುಗಳ ಲಿಖಿತ ಸಮಜಾಯಿಷಿಯನ್ನು ಒಪ್ಪಿ, ಅವರುಗಳ ವಿರುದ್ಧ ಹೊರಿಸಿರುವ ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್.ಡಿ 77 ಎಡಿಇ 2004, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಸೋಸಲೇ ಇಂದುಧರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಜಂಟಿ ಇಲಾಖಾ ವಿಚಾರಣೆ ವರದಿಯನ್ವಯ ಹಾಗೂ ಶ್ರೀ ಎಸ್.ಎಂ. ದಾನಣ್ಣವರ್, ಕಂದಾಯ ನಿರೀಕ್ಷಕರು ಮತ್ತು ಶ್ರೀ ಝೆಡ್.ಎಂ. ಕಾಲೇಮದಾರ್, ನಿವೃತ್ತ ಕಂದಾಯ ನಿರೀಕ್ಷಕರ ಇವರುಗಳ ಲಿಖಿತ ಸಮಜಾಯಿಷಿಯನ್ನು ಒಪ್ಪಿಕೊಂಡು, ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಶಿವಪ್ಪ ಹಾನಗಲ್, ನಿವೃತ್ತ ತಹಶೀಲ್ದಾರ್, ಶ್ರೀ ಎಸ್.ಎಂ.ದಾನಣ್ಣವರ್, ಕಂದಾಯ ನಿರೀಕ್ಷಕರು ಮತ್ತು ಶ್ರೀ ಝೆಡ್.ಎಂ. ಕಾಲೇಮದಾರ್, ನಿವೃತ್ತ ಕಂದಾಯ ನಿರೀಕ್ಷಕರು ಇವರುಗಳ ವಿರುದ್ಧ ಹೊರಿಸಲಾಗಿದ್ದ, ಆರೋಪಗಳಿಂದ ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.245

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಅಮರಜ್ಯೋತಿ ಗೃಹ ನಿರ್ಮಾಣ ಸಂಘಕ್ಕೆ ಭೂ ಸ್ವಾಧೀನವಾಗಿದ್ದ ಜಮೀನುಗಳನ್ನು ಭೂ ಮಾಲೀಕರಿಗೆ ಹಿಂತಿರುಗಿಸುವ ಬಗ್ಗೆ ಶ್ರೀ ವಿ.ಸಂಪತ್‌ಕುಮಾರ್, ತಹಶೀಲ್ದಾರ್ ಹಾಗೂ ಇತರರ ವಿರುದ್ಧ ಶಿಸ್ತು ಕ್ರಮದಿಂದ ದೋಷಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಬೆಂಗಳೂರು ವಿಭಾಗಾಧಿಕಾರಿಗಳು, ಬೆಂಗಳೂರು ಇವರ ಪತ್ರ ಸಂ: ಸಿಸಿಎ: ಸಿಆರ್: 23/98–99, ದಿನಾಂಕ: 30–03–1999.
2) ದಿನಾಂಕ: 07–12–1999ರ ತಿಳುವಳಿಕೆ ಪತ್ರ ಸಂ:ಕಂಇ 44 ಎಡಿಇ 99.
3) ಲಿಖಿತ ಹೇಳಿಕೆ– ಶ್ರೀ ಬಿ.ಸಂಪತ್‌ಕುಮಾರ್, ದಿನಾಂಕ: 24–01–2000.
   –– ಶ್ರೀ ಜವರೇಗೌಡ, ದಿನಾಂಕ: 18–01–2000.
   –– ಶ್ರೀಆರ್.ಹೆಚ್.ಅರಸಾಪುರ, ದಿನಾಂಕ:17–01–2000.
   –– ಶ್ರೀ ಬಿ.ಎನ್.ಭಾಸ್ಕರಚಾರಿ, ದಿನಾಂಕ: 17–07–2000.
   –– ಶ್ರೀ ಮನೋಹರ್ ಜ್ಯೋತಿ, ದಿನಾಂಕ:21–11–2000.
4) ಸರ್ಕಾರದ ಆದೇಶ ಸಂ: ಕಂಇ 44 ಎಡಿಇ 99, ದಿ: 19–04–2001.
5) ವಿಚಾರಣಾಧಿಕಾರಿಗಳ ದಿನಾಂಕ: 22–01–2002ರ ವಿಚಾರಣಾ ವರದಿ.
6) ವಿಶೇಷ ಭೂ ಸ್ವಾಧೀನಾಧಿಕಾರಿಗಳ ಪತ್ರ ಸಂ: ಎಲ್‌ಎಕ್ಯೂ:ಸಿಆರ್: 14/03–04, ದಿನಾಂಕ: 21–06–2008.
7) ದಿನಾಂಕ: 06–12–2008 ರಂದು ಮಾನ್ಯ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆ.

**ಪ್ರಸ್ತಾವನೆ:**

ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ರಘುವನಪಾಳ್ಯ, ಕೊತ್ತನೂರು ಮತ್ತು ಅರೇಹಳ್ಳಿ ಗ್ರಾಮಗಳ ಕೆಲವು ಸರ್ವೆ ನಂಬರುಗಳ ಜಮೀನುಗಳನ್ನು ಭಾರತ ಸರ್ವೋಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಭೂ ಮಾಲೀಕರುಗಳಿಗೆ ಹಿಂದಿರುಗಿಸುವ ಪೂರ್ವಭಾವಿಯಾಗಿ ಸಂಬಂಧಪಟ್ಟ ಸರ್ವೇ ನಂಬರುಗಳ ಭೂ ಮಾಲೀಕರು ಸದರಿ ಜಮೀನುಗಳನ್ನು ಭೂ ಸ್ವಾಧೀನ ಮಾಡುವಾಗ ವಿಶೇಷ ಭೂ ಸ್ವಾಧೀನಾಧಿಕಾರಿಗಳಿಂದ ಈಗಾಗಲೇ ಪಡೆದಿರುವ ಭೂ ಪರಿಹಾರ ಮೊಬಲಗನ್ನು ಮರು ಪಾವತಿ ಮಾಡಿರುವುದನ್ನು ಖಚಿತ ಪಡಿಸಿಕೊಳ್ಳದಯೇ ಸರ್ವೋಚ್ಚ ನ್ಯಾಯಾಲಯದ ಆದೇಶವನ್ನು ಸರಿಯಾಗಿ ಅರ್ಥೈಸಿಕೊಳ್ಳದೇ ಸಂಬಂಧಪಟ್ಟ ಪ್ರಾಧಿಕಾರ ಮತ್ತು ಮೇಲಾಧಿಕಾರಿಗಳಿಂದ ನಿರ್ದಿಷ್ಟವಾದ ಸ್ಪಷ್ಟೀಕರಣ ಪಡೆದುಕೊಳ್ಳದೆಯೇ ನೇರವಾಗಿ ಭೂ ಮಾಲೀಕರುಗಳಿಂದ ಅರ್ಜಿಗಳನ್ನು ಪಡೆದು ಸಂಬಂಧಿಸಿದ ಜಮೀನುಗಳಿಗೆ ಭೂ ಮಾಲೀಕರು

ಪಡೆದುಕೊಂಡಿರುವ ಭೂ ಪರಿಹಾರದ ಮೊಬಲಗನ್ನು ಭೂ ಸ್ವಾಧೀನಾಧಿಕಾರಿಯವರಿಗೆ ಪಾವತಿ ಮಾಡಿ, ಜಮೀನುಗಳ ಸ್ವಾಧೀನಪಡೆಯುವ ಷರತ್ತಿಗೊಳಪಡಿಸಿ, ಕಾನೂನು ಬಾಹಿರವಾಗಿ ಭೂ ಮಾಲೀಕರುಗಳ ಹೆಸರಿಗೆ ಖಾತೆ ಬದಲಾವಣೆ ಮಾಡಿ ಸರ್ಕಾರಕ್ಕೆ ಬೊಕ್ಕಸಕ್ಕೆ ನಷ್ಟವಾಗಲು ಈ ಕೆಳಕಂಡ ನೌಕರರು ಕಾರಣರಾಗಿರುತ್ತಾರೆಂದು ಬೆಂಗಳೂರು ವಿಭಾಗಾಧಿಕಾರಿಗಳು ವರದಿ ಮಾಡಿರುತ್ತಾರೆ.

1. ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್, ಪ್ರಸ್ತುತ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು.
2. ಶ್ರೀ ಮನೋಹರ್ ಜ್ಯೋತಿ, ಗ್ರಾಮಲೆಕ್ಕಿಗರು.
3. ಶ್ರೀ ಜವರೇಗೌಡ, ಹಿಂದಿನ ಗ್ರಾಮಲೆಕ್ಕಿಗರು, (ಪ್ರಸ್ತುತ ನಿವೃತ್ತರು)
4. ಶ್ರೀ ಪಿ.ಹೆಚ್.ಅರಸಾಪುರ, ಹಿಂದಿನ ಗ್ರಾಮಲೆಕ್ಕಿಗರು.
5. ಶ್ರೀ ಬಿ.ಎನ್.ಭಾಸ್ಕರಚಾರ್, ಹಿಂದಿನ ಗ್ರಾಮಲೆಕ್ಕಿಗರು.
6. ಶ್ರೀ ಜೋಗಯ್ಯ, (ಪ್ರಸ್ತುತ ನಿವೃತ್ತರು)

ಮುಂದುವರೆದು, ಈ ಬಗ್ಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಬೆಂಗಳೂರು ಇವರು ವರದಿ ಮಾಡಿರುವಂತೆ, ಸರ್ಕಾರಕ್ಕೆ ಬರಬೇಕಾಗಿದ್ದ ಒಟ್ಟು ಮೊತ್ತ ರೂ.1,29,80,340–00 (ಒಂದುಕೋಟಿ, ಇಪ್ಪತ್ತೊಂಬತ್ತು ಲಕ್ಷದ, ಎಂಬತ್ತು ಸಾವಿರದ ಮೂರುನೂರ ನಲವತ್ತು ರೂಪಾಯಿಗಳು ಮಾತ್ರ) ಆಗಿರುತ್ತದೆ. ಈ ಪೈಕಿ ರೂ.84,23,574–00 (ಎಂಬತ್ತುನಾಲ್ಕು ಲಕ್ಷದ ಇಪ್ಪತ್ತಮೂರು ಸಾವಿರದ ಐದುನೂರ ಎಪ್ಪತ್ತನಾಲ್ಕು ರೂಪಾಯಿಗಳು ಮಾತ್ರ) ಗಳನ್ನು ಭೂ ಮಾಲೀಕರು ಸರ್ಕಾರಕ್ಕೆ ಪಾವತಿ ಮಾಡಿರುವುದಾಗಿ ಇನ್ನೂ ರೂ.45,56,766–00 (ನಲವತ್ತೈದು ಲಕ್ಷದ ಐವತ್ತಾರು ಸಾವಿರದ ಏಳುನೂರ ಅರವತ್ತಾರು ರೂಪಾಯಿಗಳು ಮಾತ್ರ) ಗಳನ್ನು ಪಾವತಿ ಮಾಡಬೇಕೆಂದು ವರದಿ ಮಾಡಿ, ಮೇಲ್ಕಂಡ ಅಧಿಕಾರಿ/ ನೌಕರರು ಕರ್ತವ್ಯಕ್ಕೆ ಎಸಗಿರುವ ಆಪಾದನೆಗೆ ಅವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ ಕ್ರ.ಸಂ(1) ರಲ್ಲಿ ದಿನಾಂಕ: 30–03–1999ರ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಸರ್ಕಾರವು ವಿಭಾಗಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಸಂಪತ್‌ಕುಮಾರ್, ಹಿಂದಿನ ವಿಶೇಷ ತಹಶೀಲ್ದಾರ್ ಹಾಗೂ ಇತರರ ವಿರುದ್ಧ ಈ ವಿಚಾರಣೆಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 13ರನ್ವಯ ಮೇಲೆ (2)ರಲ್ಲಿ ಓದಲಾದ ದಿನಾಂಕ: 07–12–1999ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಯಿತು. ಸದರಿ ನೋಟೀಸಿಗೆ ಆಪಾದಿತರು ಮೇಲೆ ಓದಲಾದ ಕ್ರ.ಸಂ(3)ರಲ್ಲಿ ರಕ್ಷಣಾ ಹೇಳಿಕೆ ಸಲ್ಲಿಸಿ, ಆಪಾದನೆಯನ್ನು ಅಲ್ಲಗೆಳೆದಿರುತ್ತಾರೆ. ಆದ್ದರಿಂದ ಈ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ತಿಳಿಯಲು ಮೇಲೆ (4)ರಲ್ಲಿ ಓದಲಾದ ದಿನಾಂಕ: 19–04–2001ರ ಆದೇಶದಲ್ಲಿ ಶ್ರೀ ಎಸ್. ಅನಂತಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11(ಎ)ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಇಲಾಖಾ ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು.

ವಿಚಾರಣಾ ಪ್ರಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿನಾಂಕ: 22–01–2002ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಒಂದರಿಂದ ಆರನೇ ಆರೋಪಿ ನೌಕರರುಗಳ ಮೇಲಿನ ಯಾವುದೇ ಆರೋಪವು ರುಜುವತಾಗಿರುವುದಿಲ್ಲವೆಂದು ಹಾಗೂ ಖಾತೆ ಪುನರ್ ಸ್ಥಾಪನೆಯು ಸರ್ವೋಚ್ಚ ನ್ಯಾಯಾಲಯದ ಆದೇಶಕ್ಕೆ ಅಕ್ಷರಶ: ಸರಿಯಾಗಿರುವುದೆಂದು ವರದಿ ನೀಡಿರುತ್ತಾರೆ.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಅವರು ಮೇಲೆ ಓದಲಾದ ಕ್ರ.ಸಂ: (6) ದಿನಾಂಕ: 21–06–2008ರ ಪತ್ರದಲ್ಲಿ ಭೂ ಸ್ವಾಧೀನ ರದ್ದಿಯಾತಿಯಿಂದ ಅಮರಜ್ಯೋತಿ ಗೃಹ ನಿರ್ಮಾಣ ಸಂಘಕ್ಕೆ 2.40 ಕೋಟಿ ಅವಾರ್ಡ್ ಮೊಬಲಗನ್ನು ರೈತರು ವಾಪಸ್ಸು ಕಟ್ಟಬೇಕಾಗಿದ್ದು, ಈ ಪೈಕಿ 2.27 ಕೋಟಿ ರೂಪಾಯಿಗಳನ್ನು ಮರುಪಾವತಿಸಲಾಗಿದೆ. ಉಳಿಕೆ ರೂ.13.00 ಲಕ್ಷ ಬಾಕಿ ವಸೂಲಾತಿ ಬಗ್ಗೆ ಸಂಬಂಧಪಟ್ಟ ರೈತರಿಗೆ ನೋಟೀಸು ಜಾರಿ ಮಾಡಿದ್ದು, ವಸೂಲಿ ಕ್ರಮ ಕೈಗೊಳ್ಳಲಾಗುತ್ತಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ಮೇಲೆ ಓದಲಾದ ಕ್ರ.ಸಂ: (7)ರ ದಿನಾಂಕ: 06–12–2008ರಂದು ಮಾನ್ಯ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಭೆಯನ್ನು ಏರ್ಪಡಿಸಲಾಗಿದ್ದು, ಸದರಿ ಸಭೆಗೆ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು, ಕಾನೂನು ಕೋಶದ ಮುಖ್ಯಸ್ಥರು ಹಾಗೂ ಉಪಕಾರ್ಯದರ್ಶಿಗಳು ಸಭೆಯಲ್ಲಿ ಹಾಜರಿದ್ದರು. ಸದರಿ ಸಭೆಯಲ್ಲಿ ನಿರ್ಣಯಿಸಿದಂತೆ, ಪ್ರಸ್ತುತ ಶಿಸ್ತು ಪ್ರಕರಣದಲ್ಲಿ ಕೈಗೊಂಡ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಶ್ರೀ ಸಂಪತ್‌ಕುಮಾರ್, ತಹಶೀಲ್ದಾರ್ ಹಾಗೂ ಮತ್ತಿತರರುಗಳ ವಿರುದ್ಧ ಮಾಡಲಾದ ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿ, ಆದೇಶ ಹೊರಡಿಸುವುದು ಹಾಗೂ ಬಾಕಿ ಮೊತ್ತ ರೂ.13.00 ಲಕ್ಷಗಳನ್ನು ಭೂ ಕಂದಾಯ ಬಾಕಿ ಎಂದು ವಸೂಲು ಮಾಡಲು ಪ್ರಸ್ತುತ ತಹಶೀಲ್ದಾರರ ಮೇಲೆ ಹೊಣೆಗಾರಿಕೆ ನಿಗದಿಪಡಿಸಲು ಜಿಲ್ಲಾಧಿಕಾರಿಗಳೇ ತಿಳಿಸುವುದು ಎಂಬುದಾಗಿ ತೀರ್ಮಾನ ತೆಗೆದುಕೊಳ್ಳಲಾಗಿದೆ. ಆದ್ದರಿಂದ ಮೇಲ್ಕಂಡ ಅಧಿಕಾರಿ ಹಾಗೂ ನೌಕರರನ್ನು ಈ ಆಪಾದನೆಯಿಂದ ಕೈಬಿಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಕಂಇ 44 ಎಡಿಇ 99, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ವಿಚಾರಣಾಧಿಕಾರಿಗಳು ಒಪ್ಪಿಸಿರುವ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ, ಶ್ರೀ ಬಿ. ಸಂಪತ್‌ಕುಮಾರ್, ಪ್ರಸ್ತುತ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ

ಜಿಲ್ಲೆ, (2) ಶ್ರೀ ಮನೋಹರ್ ಜ್ಯೋತಿ, ಗ್ರಾಮಲೆಕ್ಕಿಗರು, (3) ಶ್ರೀ ಜವರೇಗೌಡ, ಹಿಂದಿನ ಗ್ರಾಮಲೆಕ್ಕಿಗರು, (ಪ್ರಸ್ತುತ ನಿವೃತ್ತರು), (4) ಶ್ರೀ ಪಿ.ಹೆಚ್. ಅರಸಾಪುರ, ಹಿಂದಿನ ಗ್ರಾಮಲೆಕ್ಕಿಗರು, (5) ಶ್ರೀ ಬಿ.ಎನ್. ಭಾಸ್ಕರಚಾರ್, ಹಿಂದಿನ ಗ್ರಾಮಲೆಕ್ಕಿಗರು ಹಾಗೂ (6) ಶ್ರೀ ಜೋಗಯ್ಯ, (ಪ್ರಸ್ತುತ ನಿವೃತ್ತರು) ಇವರುಗಳನ್ನು ಸರ್ಕಾರವು ಈ ಆಪಾದನೆಯಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.246

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ತಾಲ್ಲೂಕು ಹಾಗೂ ಇತರೆ ಸಿಬ್ಬಂದಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು–ಇಲಾಖಾ ವಿಚಾರಣೆ ಹೂಡಿರುವುದನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಆದೇಶ ಸಂ: ಇಎಸ್‌ಟಿ (2)ಸಿಸಿಎ.2/2006–07, ದಿನಾಂಕ: 10–10–2006.
2) ಸರ್ಕಾರದ ಆದೇಶ ಸಂ: ಕಂಇ 69 ಎಡಿಇ 2006, ದಿನಾಂಕ: 15–05–2007.
3) ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ: 25–05–2007.
4) ಶ್ರೀ ಎಸ್. ಮಹಾದೇವಪ್ಪ, ಶಿರಸ್ತೇದಾರ್, ಶ್ರೀ ಗಂಗಾಧರಯ್ಯ, ರಾಜಸ್ವ ನಿರೀಕ್ಷಕರು, ಶ್ರೀ ಅಬ್ದುಲ್ ಖಾಲಿಕ್, ಗ್ರಾಮಲೆಕ್ಕಿಗರು ಇವರುಗಳ ಸಮಜಾಯಿಷಿ ದಿನಾಂಕ: 14-06–2007, 15-06–2007 ಮತ್ತು 14–06–2007.
5) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ವರದಿ ದಿನಾಂಕ: 13–02–2008.
6) ಸರ್ಕಾರದ ಆದೇಶ ಸಂ: ಆರ್‌ಡಿ 69 ಎಡಿಇ 2006, ದಿ:25–04–2008.
7) ವಿಚಾರಣಾಧಿಕಾರಿಗಳ ವರದಿ ದಿನಾಂಕ: 18–10–2008.
8) ಸರ್ಕಾರದ ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 18–11–2008.
9) ಶ್ರೀ ಮಹಾದೇವಪ್ಪ, ಶಿರಸ್ತೇದಾರ್ ಇವರ ಸಮಜಾಯಿಷಿ ದಿನಾಂಕ: 26–11–2008.

**ಪ್ರಸ್ತಾವನೆ:**

ಹೆಚ್.ಡಿ. ಕೋಟೆ ತಾಲ್ಲೂಕು, ಮಷ್ಕೆರೆ ಗ್ರಾಮದ ಸ.ನಂ: 108, 109 ಮತ್ತು 110ರ ಜಮೀನಿನ ತಕರಾರು ಬಗ್ಗೆ ಶ್ರೀ ಬಸವೇಗೌಡ, ಮಂಡ್ಯ ಜಿಲ್ಲೆ, ಮಂಡ್ಯರವರು ದಿನಾಂಕ: 21–06–2006ರಂದು ಮಾನ್ಯ ಕಂದಾಯ ಸಚಿವರಿಗೆ ಮನವಿ ಸಲ್ಲಿಸಿದ್ದು, ಸದರಿ ಮನವಿಯನ್ನು ಆಧರಿಸಿ ಸರ್ಕಾರವು ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ತಾಲ್ಲೂಕು, ಶ್ರೀ ಮಹದೇವಪ್ಪ, ಆರ್.ಆರ್. ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹೆಚ್.ಡಿ.ಕೋಟೆ, ಶ್ರೀ ಗಂಗಾಧರಯ್ಯ, ರಾಜಸ್ವ ನಿರೀಕ್ಷಕರು, ಕಸಬಾ ಹೋಬಳಿ, ಹೆಚ್.ಡಿ.ಕೋಟೆ ತಾಲ್ಲೂಕು ಮತ್ತು ಶ್ರೀ ಅಬ್ದುಲ್ ಖಾಲಿಕ್, ಗ್ರಾಮಲೆಕ್ಕಿಗರು, ರಾಜೇಗೌಡನಹುಂಡಿ ವೃತ್ತ, ಹೆಚ್.ಡಿ.ಕೋಟೆ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕಾಯ್ದಿರಿಸಿ ಸರ್ಕಾರದಿಂದ ಅಮಾನತ್ತಿನಲ್ಲಿಡಲು ನೀಡಿರುವ ನಿರ್ದೇಶನದನ್ವಯ ಮೇಲ್ಕಂಡ ನೌಕರರುಗಳನ್ನು ಮೇಲೆ ಓದಲಾದ ಕ್ರ.ಸಂ. (1) ದಿನಾಂಕ: 10–10–2006ರ ಆದೇಶದಲ್ಲಿ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು.

ನಂತರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ಮತ್ತು ಇತರರ ಸಿಬ್ಬಂದಿಗಳ ವಿರುದ್ಧ ಅನುಬಂಧ–I ರಿಂದ IV ವರೆಗಿನ ದೋಷಾರೋಪಣಾ ಪಟ್ಟಿಯೊಂದಿಗೆ ದಿನಾಂಕ: 26–02–2007 ರನ್ವಯ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರ ಮೇರೆಗೆ ಆರೋಪಿತ ಅಧಿಕಾರಿ/ ನೌಕರರಾದ ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ, ಶ್ರೀ ಮಹದೇವಪ್ಪ, ಆರ್.ಆರ್.ಶಿರಸ್ತೇದಾರ್, ಶ್ರೀ ಗಂಗಾಧರಯ್ಯ, ರಾಜಸ್ವ ನಿರೀಕ್ಷಕರು ಹಾಗೂ ಶ್ರೀ ಅಬ್ದುಲ್ ಖಾಲಿಕ್, ಗ್ರಾಮ ಲೆಕ್ಕಿಗರು ಇವರುಗಳಿಗೆ ಅನುಬಂಧ I ರಿಂದ IV ವರೆಗಿನ ದೋಷಾರೋಪಣಾ ಪಟ್ಟಿಯೊಂದಿಗೆ ಸಿಸಿಎ ನಿಯಮಾವಳಿಗಳನ್ವಯ ಕಾರಣ ಕೇಳುವ ನೋಟೀಸನ್ನು ದಿನಾಂಕ: 24–5–2007ರಲ್ಲಿ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಈರಾಬೋವಿ, ನಿವೃತ್ತ ತಹಶೀಲ್ದಾರ್ ಇವರನ್ನು ಬಿಟ್ಟು ಉಳಿದ 3 ನೌಕರರುಗಳು ತಮ್ಮ ಆರೋಪಗಳನ್ನು ಅಲ್ಲಗೆಳೆಯುತ್ತಾ ತಮ್ಮ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಸಮಜಾಯಿಷಿಯನ್ನು ನೀಡಿರುತ್ತಾರೆ.

ಈ ಮಧ್ಯೆ ಆರೋಪಿತ ನೌಕರರಾದ ಶ್ರೀ ಮಹದೇವಪ್ಪ (ಅಮಾನತ್ತಿನಲ್ಲಿರುವ) ಮತ್ತು ಇತರರು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ದಿನಾಂಕ: 10–10–2006ರ ಅಮಾನತ್ತಿನ ಆದೇಶವನ್ನು ಮಾನ್ಯ ಕರ್ನಾಟಕ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂ: 3764–66/07 ರಲ್ಲಿ ದಿನಾಂಕ: 23–08–2007ರಂದು ಮಧ್ಯಂತರ ಆದೇಶ ನೀಡಿ ಆಪಾದಿತ ಸರ್ಕಾರಿ ನೌಕರರ ಅಮಾನತ್ತು ತೆರವುಗೊಳಿಸುವ ಕುರಿತು ದಿನಾಂಕ: 10–09–2007ರೊಳಗೆ ಕ್ರಮ ಕೈಗೊಂಡು ಪಾಲನಾ ವರದಿ ಸಲ್ಲಿಸುವಂತೆ ನಿರ್ದೇಶನ ನೀಡಲಾಗಿರುತ್ತದೆ. ಸದರಿ ಆದೇಶದನ್ವಯ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಶ್ರೀ ಮಹದೇವಪ್ಪ, ಹಿಂದಿನ ಆರ್.ಆರ್. ಶಿರಸ್ತೇದಾರ್, ಹೆಚ್.ಡಿ.ಕೋಟೆ ತಾಲ್ಲೂಕು ಕಛೇರಿ ಇವರನ್ನು ದಿನಾಂಕ: 19–09–2007ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸಲಾಗಿರುತ್ತದೆ. ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಇವರು ದಿನಾಂಕ: 10–09–2007ರ ಆದೇಶದಲ್ಲಿ

ಶ್ರೀ ಗಂಗಾಧರಯ್ಯ, ರಾಜಸ್ವ ನಿರೀಕ್ಷಕರು ನಿವೃತ್ತಿಯಾಗಿರುವುದರಿಂದ ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಪ್ರಶ್ನೆ ಉದ್ಭವಿಸಿರುವುದಿಲ್ಲವೆಂದು ಹಾಗೂ ಇನ್ನುಳಿದ ಶ್ರೀ ಅಬ್ದುಲ್ ಖಾಲಿಕ್, ಗ್ರಾಮಲೆಕ್ಕಿಗರು ಇವರನ್ನು ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸಲಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಮಾನ್ಯ ನ್ಯಾಯಾಲಯದ ಗಮನಕ್ಕೆ ತಂದಿದ್ದು ಸದರಿ ಅರ್ಜಿಯು ವಜಾಗೊಂಡಿರುತ್ತದೆ.

ಮೇಲೆ ಓದಲಾದ ಕ್ರ.ಸಂ: 5 ರಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಶ್ರೀ ಈರಾಬೋವಿ, ನಿವೃತ್ತ ತಹಶೀಲ್ದಾರ್‌ರವರು ದಿನಾಂಕ: 06–9–2007ರಂದು ಮರಣ ಹೊಂದಿರುವುದಾಗಿ ವರದಿ ನೀಡಿರುತ್ತಾರೆ. ಸದರಿ ಜಿಲ್ಲಾಧಿಕಾರಿಗಳ ವರದಿ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ತಾಲ್ಲೂಕು ಇವರನ್ನು ಇಲಾಖಾ ವಿಚಾರಣೆಯಿಂದ ಕೈಬಿಟ್ಟು ಉಳಿದ ಆಪಾದಿತ ನೌಕರರ ವಿರುದ್ಧ ಮಾಡಲಾದ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ಶ್ರೀ ಎನ್.ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರ.ಸಂ:(6), ದಿನಾಂಕ: 25–04–2008ರಲ್ಲಿ ನೇಮಿಸಲಾಗಿತ್ತು.

ಶ್ರೀ ಎನ್. ಸುಬ್ಬಾರಾವ್, ವಿಚಾರಣಾಧಿಕಾರಿಗಳು ಇವರು ಈ ಪ್ರಕರಣದ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಿ, ಸರ್ಕಾರಕ್ಕೆ ದಿನಾಂಕ: 18–10–2008ರಲ್ಲಿ ವಿಚಾರಣಾ ವರದಿ ಸಲ್ಲಿಸಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ನೌಕರರ ವಿರುದ್ಧ ಈ ಕೆಳಕಂಡಂತೆ ನಿರ್ಣಯಿಸಿರುತ್ತಾರೆ.

| | | |
|---|---|---|
| 1) | ಶ್ರೀ ಎಸ್. ಮಹದೇವಪ್ಪ,<br>ಹಿಂದಿನ ಶಿರಸ್ತೇದಾರ್,<br>ಹೆಚ್.ಡಿ.ಕೋಟೆ ತಾಲ್ಲೂಕು ಕಛೇರಿ | – 1ನೇ ಆರೋಪ – ರುಜುವಾತಾಗಿದೆ.<br>(ಸಮರ್ಪಕ ಕಾರಣ ನೀಡಿಲ್ಲ 12 ದಿನಗಳ ವಿಳಂಬವಾಗಿದೆ)<br>– 2ನೇ ಆರೋಪ– ರುಜುವಾತಾಗಿಲ್ಲ. |
| 2) | ಶ್ರೀ ಗಂಗಾಧರಯ್ಯ<br>ನಿವೃತ್ತ ರಾಜಸ್ವ ನಿರೀಕ್ಷಕರು | – ಆರೋಪ – ರುಜುವಾತಾಗಿಲ್ಲ. |
| 3) | ಶ್ರೀ ಅಬ್ದುಲ್ ಖಾಲಿಕ್<br>ನಿವೃತ್ತ ಗ್ರಾಮಲೆಕ್ಕಿಗರು | – ಆರೋಪ – ರುಜುವಾತಾಗಿಲ್ಲ. |

ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ವಯ, ಶ್ರೀ ಎಸ್.ಮಹದೇವಪ್ಪ, ಶಿರಸ್ತೇದಾರ್ ಇವರಿಗೆ ಮೇಲೆ ಓದಲಾದ ಕ್ರ.ಸಂ(8) ದಿನಾಂಕ: 18–11–2008ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಎಸ್. ಮಹದೇವಪ್ಪ ಇವರು ತಮ್ಮ ಲಿಖಿತ ಸಮಜಾಯಿಷಿಯಲ್ಲಿ ತಮ್ಮ ವಿರುದ್ಧ ವಿಚಾರಣಾಧಿಕಾರಿಗಳು ನಿರ್ಣಯಿಸಿರುವ ಒಂದನೇ ಆರೋಪದ ಭಾಗಶ: ರುಜುವಾತಾಗಿರುವುದರ ಬಗ್ಗೆ, ಭೂಮಿ ಕಿಯೋಸ್ಕೋನಲ್ಲಿ ಜೇಷ್ಠತೆ ಅನುಸರಿಸಿ ನಡೆಯಬೇಕಾದ ಪ್ರಕ್ರಿಯೆಯಾಗಿದ್ದು, ಜೇಷ್ಠತೆಯ ಅನುಸರಿಸದಿದ್ದಲ್ಲಿ, ಸಿಸ್ಟಮ್‌ನಿಂದ ಫಾರಂ 12 & 21 ಜನರೇಟ್ ಮಾಡುವ ಪ್ರಕ್ರಿಯೆ ಸಾಧ್ಯವಾಗದ ಕ್ರಿಯೆ ಆಗಿರುತ್ತದೆ ಎಂದು ತಿಳಿಸಿ, ತಮ್ಮ ವಿರುದ್ಧ ಆರೋಪಿಸಿರುವ ಕೇವಲ 12 ದಿನಗಳ ವಿಳಂಬದ ಕುರಿತು ಅರ್ಜಿಯನ್ನು ಸ್ವೀಕರಿಸಿದ ಬಗ್ಗೆ ಹಾಗೂ ಅದನ್ನು ರಾಜಸ್ವ ನಿರೀಕ್ಷಕರಿಗೆ ಹಾಗೂ ಗ್ರಾಮಲೆಕ್ಕಿಗರಿಗೆ ರವಾನಿಸಿದ ಬಗ್ಗೆ ದಿನಾಂಕಗಳನ್ನು ನಮೂದಿಸಿ, ವಿವರಣೆ ನೀಡಿರುವುದನ್ನು ಸರ್ಕಾರವು ಪರಿಶೀಲಿಸಿ, ಈ ಕುರಿತು ಸದರಿಯವರ ವಿರುದ್ಧ ಆರೋಪಿಸಿರುವ ಕೇವಲ 12 ದಿನಗಳ ವಿಳಂಬವಾಗಿದೆಯೇ ಹೊರತು ಬೇರೆ ಯಾವುದೇ ಹಣಕಾಸಿನ ನಷ್ಟವಾಗಿರುವುದಿಲ್ಲವೆಂದು ತೀರ್ಮಾನಿಸಿ ಈ ಪ್ರಕರಣದಲ್ಲಿ ಭಾಗಿಯಾಗಿರುವ ಮೇಲ್ಕಂಡ 3 ನೌಕರರ ವಿರುದ್ಧ ಹೂಡಲಾಗಿದ್ದ, ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ಆರ್‌ಡಿ 69 ಎಡಿಇ 2006, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಎನ್.ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಜಂಟಿ ಇಲಾಖಾ ವಿಚಾರಣೆ ವರದಿಯನ್ವಯ ಹಾಗೂ ಶ್ರೀ ಎಸ್. ಮಹಾದೇವಪ್ಪ, ಶಿರಸ್ತೇದಾರ್ ಇವರು ಎರಡನೇ ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿದ್ದ ಲಿಖಿತ ಸಮಜಾಯಿಷಿಯನ್ನು ಒಪ್ಪಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಎಸ್. ಮಹದೇವಪ್ಪ, ಹಿಂದಿನ ಶಿರಸ್ತೇದಾರ್, ಹೆಚ್.ಡಿ.ಕೋಟೆ ತಾಲ್ಲೂಕು ಕಛೇರಿ (ಪ್ರಸ್ತುತ ಶಿರಸ್ತೇದಾರ್, ಕೊಳ್ಳೇಗಾಲ ತಾಲ್ಲೂಕು ಕಛೇರಿ), ಶ್ರೀ ಗಂಗಾಧರಯ್ಯ, ನಿವೃತ್ತ ರಾಜಸ್ವ ನಿರೀಕ್ಷಕರು ಮತ್ತು ಶ್ರೀ ಅಬ್ದುಲ್ ಖಾಲಿಕ್, ನಿವೃತ್ತ ಗ್ರಾಮಲೆಕ್ಕಿಗರು, ಇವರುಗಳ ವಿರುದ್ಧ ಹೂಡಲಾಗಿದ್ದ ಆರೋಪಗಳಿಂದ ಕೈಬಿಟ್ಟು, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.247

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು, ಹಾಲಿ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಹಾಗೂ ಇತರರು – ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂ: ಎಲ್ & ಡಿ(ಪಿ) ಹರಾಜು– ಸಿಆರ್–4–06–07, ದಿನಾಂಕ: 06–03–2007 ಹಾಗೂ ಎಲ್ & ಡಿ(ಪಿ) ಸಿಆರ್–37/ 07–08, ದಿನಾಂಕ: 17–07–2007.
2) ಸರ್ಕಾರದ ಆದೇಶ ಸಂ: ಆರ್‌ಡಿ 34 ಎಡಿಇ 2007, ದಿನಾಂಕ:20–11–2007.
3) ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂ: ಇಎಸ್‌ಟಿ(1): ಸಿಆರ್: 70/ 2007–08, ದಿನಾಂಕ: 29–11–2007.
4) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂ: 4907 ಮತ್ತು 4908/2007, ದಿನಾಂಕ: 24–10–2008.
5) ಶ್ರೀ ಸಂಪತ್‌ಕುಮಾರ್, ತಹಶೀಲ್ದಾರ್ ಅವರ ಮನವಿ ದಿನಾಂಕ: 12–11–2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 04–06–2007 ಮತ್ತು 06–03–2007ರ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಅವರ ಪತ್ರಗಳಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಕಸಬಾ ಹೋಬಳಿಯ ಬಿಸವನ ಹಳ್ಳಿಯ ಸರ್ವೆ ನಂ: 62ರಲ್ಲಿನ 2–20 ಎಕರೆ–ಗುಂಟೆ ಒತ್ತುವರಿ ಜಮೀನನ್ನು ಸಾರ್ವಜನಿಕ ಹರಾಜಿಗೆ ಸಂಬಂಧಿಸಿದಂತೆ ಅಂದಿನ ದೊಡ್ಡಬಳ್ಳಾಪುರ ತಹಶೀಲ್ದಾರರಾದ ಶ್ರೀ ಬಿ.ಸಂಪತ್‌ಕುಮಾರ್ (ಹಾಲಿ ತಹಶೀಲ್ದಾರ್ ದೇವನಹಳ್ಳಿ) ಇವರು ಕಂದಾಯ ದಾಖಲೆಗಳನ್ನು ಪರಿಶೀಲಿಸದೆ ಅಧೀನ ಸಿಬ್ಬಂದಿಯವರಾದ ಶ್ರೀ ನರಸಿಂಹಮೂರ್ತಿ ತಾಲ್ಲೂಕು ಸರ್ವೇಯರ್ ಹಾಗೂ ನಾಗರಾಜ್, ರಾಜಸ್ವ ನಿರೀಕ್ಷಕರು ಕಸಬಾ ಹೋಬಳಿ ಇವರ ವರದಿಯನ್ನು ಆಧರಿಸಿ ಸದರಿ ಜಮೀನು ಸಾರ್ವಜನಿಕ ಹರಾಜಿಗೆ ಲಭ್ಯವಿದೆಯೆಂದು ಮೇಲಾಧಿಕಾರಿಗಳಿಗೆ ವರದಿ ನೀಡಿ, ದಿನಾಂಕ: 19–12–2005ರಂದು ಸಾರ್ವಜನಿಕ ಹರಾಜಿಗೆ ಕಾರಣರಾಗಿರುತ್ತಾರೆಂದು ತಿಳಿಸಿರುವರು. ಸದರಿ ಜಮೀನನ್ನು ಹರಾಜಿನಲ್ಲಿ ಶ್ರೀ ಸಿ.ರಾಮಯ್ಯರೆಡ್ಡಿ ಎಂಬುವರು ಅತಿ ಹೆಚ್ಚಿನ ಮೊತ್ತಕ್ಕೆ ಬಿಡ್ ಮಾಡಿ ರೂ.43.00 ಲಕ್ಷಗಳನ್ನು ಸರ್ಕಾರಕ್ಕೆ ಸಂದಾಯ ಮಾಡಿದ್ದು ನಂತರ ಭೌತಿಕವಾಗಿ ಜಮೀನು ತೋರಿಸಿ ಹಸ್ತಾಂತರಿಸಲು ಕಂದಾಯ ಇಲಾಖೆಯ ಅಧಿಕಾರಿಗಳು ವಿಫಲರಾಗಿರುವರು. ಹಾಗೂ ಸರ್ವೇ ನಂ:42ರಲ್ಲಿ ಹರಾಜಿಗೆ ಒತ್ತುವರಿ ಜಮೀನು ಲಭ್ಯವಿಲ್ಲವೆಂದು ತಿಳಿಸಿರುವರು. ಆದುದರಿಂದ, ಸದರಿ ಜಮೀನು ಸಾರ್ವಜನಿಕ ಹರಾಜಿಗೆ ಲಭ್ಯವಿದೆಯೆಂದು ತಪ್ಪು ಮಾಹಿತಿ ನೀಡಿ ಕರ್ತವ್ಯ ಚ್ಯುತಿ ಎಸಗಿರುವ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್ ದೊಡ್ಡಬಳ್ಳಾಪುರ (ಹಾಲಿ ತಹಶೀಲ್ದಾರ್ ದೇವನಹಳ್ಳಿ) ಶ್ರೀ ನಾಗರಾಜ್ ರಾಜಸ್ವ ನಿರೀಕ್ಷಕರು ಹಾಗೂ ಶ್ರೀ ನರಸಿಂಹಮೂರ್ತಿ ತಾಲ್ಲೂಕು ಸರ್ವೇಯರ್ ದೊಡ್ಡಬಳ್ಳಾಪುರ ತಾಲ್ಲೂಕು ಇವರನ್ನು ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತು ಮಾಡಲು ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಓದಲಾದ (2) ದಿನಾಂಕ: 20–11–2007ರ ಆದೇಶದಲ್ಲಿ ಶ್ರೀ ಸಂಪತ್‌ಕುಮಾರ್, ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು (ಹಾಲಿ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು), (2) ಶ್ರೀ ನಾಗರಾಜ್, ರಾಜಸ್ವ ನಿರೀಕ್ಷಕರು, ಕಸಬಾ ಹೋಬಳಿ, ದೇವನಹಳ್ಳಿ ತಾಲ್ಲೂಕು, (3) ಶ್ರೀ ನರಸಿಂಹಮೂರ್ತಿ, ತಾಲ್ಲೂಕು ಸರ್ವೇಯರ್, ದೊಡ್ಡಬಳ್ಳಾಪುರ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ:(3)ರ ದಿನಾಂಕ: 29–11–2007ರಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಅವರು ಸರ್ಕಾರಕ್ಕೆ ವರದಿ ಮಾಡುತ್ತಾ ಶ್ರೀ ಸಂಪತ್‌ಕುಮಾರ್ ಹಾಗೂ ಇತರರು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂ: 4853/2007, ದಿನಾಂಕ: 24–11–2007ರಂದು ಮಧ್ಯಂತರ ಆದೇಶದಲ್ಲಿ ಇವರನ್ನು ಸೇವೆಯಿಂದ ಬಿಡುಗಡೆಯಾಗದೇ ಇದ್ದಲ್ಲಿ, ಸದರಿಯವರನ್ನು ಯತಾಸ್ಥಿತಿಯಲ್ಲಿರಿಸಲು ದಿನಾಂಕ: 23–11–2007ರಂದು ಆದೇಶ ಹೊರಡಿಸಲಾಗಿತ್ತು. ಸರ್ಕಾರದ ದಿನಾಂಕ: 20–11–2007ರ ಆದೇಶವು ದಿನಾಂಕ: 26–11–2007ರಂದು ಸ್ವೀಕೃತಗೊಂಡಿದ್ದು, ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಸೇವೆಯಿಂದ ಬಿಡುಗಡೆಯಾಗದಿದ್ದಲ್ಲಿ, ಯತಾಸ್ಥಿತಿಯಲ್ಲಿಡಲು ಆಡಳಿತ ಆದೇಶವಾಗಿರುವುದರಿಂದ ಶ್ರೀ ಸಂಪತ್‌ಕುಮಾರ್, ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ರವರು ಸೇವೆಯಿಂದ ಬಿಡುಗಡೆಗೊಂಡಿರುವುದಿಲ್ಲ. ಹಾಗೂ ಶ್ರೀ ನಾಗರಾಜ್, ರಾಜಸ್ವ ನಿರೀಕ್ಷಕರು, ಕಸಬಾ ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಹಾಲಿ ಚುನಾವಣಾ ಶಿರಸ್ತೇದಾರ್, (ನಿಯಮ 32ರಡಿ), ಕನಕಪುರ ತಾಲ್ಲೂಕು, ಮತ್ತು ಶ್ರೀ ನರಸಿಂಹಮೂರ್ತಿ ಹಿಂದಿನ ತಾಲ್ಲೂಕು ಸರ್ವೇಯರ್, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿರುವ ಇವರನ್ನು ಸೇವೆಯಿಂದ ಬಿಡುಗಡೆಗೊಳಿಸಲು ಸಂಬಂಧಿಸಿದ ಕಛೇರಿಯ ಅಧಿಕಾರಿಗಳಿಗೆ ಸರ್ಕಾರದ ಆದೇಶದ ಪ್ರತಿಯೊಂದಿಗೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ (4)ರ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ: 24–10–2008ರ ಅಂತಿಮ ಆದೇಶದಲ್ಲಿ ಸರ್ಕಾರದ ಸುತ್ತೋಲೆ ಸಂ: ಸಿಆಸುಇ 2 ಸೇಇವಿ 2003, ದಿನಾಂಕ: 06–02–2003ರಂತೆ ಸರ್ಕಾರವು ಅಮಾನತ್ತಿನ ಆದೇಶವನ್ನು ನ್ಯಾಯ ಮಂಡಳಿಯ ಆದೇಶ ತಲುಪಿದ ದಿನಾಂಕದಿಂದ ಒಂದು ತಿಂಗಳೊಳಗೆ ಪುನರ್ ಪರಿಶೀಲಿಸಲು ಆದೇಶಿಸಿರುತ್ತಾರೆ.

ಮೇಲೆ ಓದಲಾದ (5)ರ ದಿನಾಂಕ: 12–11–2008ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ, ಹರಾಜಿಗೆ ಜಮೀನು ಲಭ್ಯವಿಲ್ಲವೆಂದು ತಾವು ಉಪವಿಭಾಗಾಧಿಕಾರಿಗಳ ಗಮನಕ್ಕೆ ತಂದಿರುವುದಾಗಿ ಅವರು ತಮ್ಮ ಹೇಳಿಕೆಯನ್ನು ಪರಿಗಣಿಸದೇ ಜಮೀನನ್ನು ಹರಾಜು ಮಾಡಿರುವುದರಿಂದ, ಈ ಗೊಂದಲ ಉಂಟಾಗಿದೆಯೆಂದು ತಿಳಿಸಿ, ನಂತರ ಹರಾಜಿನ ಅಂತಿಮ ಬಿಡ್ಡುದಾರರು ಹರಾಜಿನ ಮೊಬಲಗನ್ನು ವಾಪಸ್ಸು ಪಡೆದುಕೊಂಡು, ಜಿಲ್ಲಾಧಿಕಾರಿಗಳು ಪ್ರಕರಣವನ್ನು ಮುಕ್ತಾಯಗೊಳಿಸಿರುತ್ತಾರೆಂದು ತಿಳಿಸಿ, ತಮ್ಮ ಅಮಾನತ್ತು ಆದೇಶವನ್ನು ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳ ಶಿಫಾರಸ್ಸು ಮೇರೆಗೆ ಹಾಗೂ ಸರ್ಕಾರದ ಪತ್ರ ಸಂ: ಆರ್‌ಡಿ 1395 ಎಲ್‌ಜಿಬಿ 2007, ದಿನಾಂಕ: 02–01–2008ರಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಬಿಸುವನಹಳ್ಳಿ ಗ್ರಾಮದ ಸರ್ವೇ ನಂ:42ರಲ್ಲಿರುವ 2–20 ಎಕರೆ–ಗುಂಟೆ ಜಮೀನಿನ ಹರಾಜು ಬಾಬ್ತು ಅರ್ಜಿದಾರರಿಂದ ಪಾವತಿಸಿಕೊಂಡಿರುವ 43 ಲಕ್ಷಗಳನ್ನು ಹಿಂತಿರುಗಿಸಲು ಸರ್ಕಾರದ ಪೂರ್ವಾನುಮತಿ ನೀಡಿರುವುದರಿಂದ, ಅದರಂತೆ, ಜಿಲ್ಲಾಧಿಕಾರಿಗಳು, ದಿನಾಂಕ: 07–01–2008ರಂದು ಆದೇಶ ಹೊರಡಿಸಿ, ಸದರಿ ಬಿಡ್ಡುದಾರರಾದ ಶ್ರೀ ರಾಮಯ್ಯರೆಡ್ಡಿ ಇವರಿಗೆ ರೂ.43.00 ಲಕ್ಷಗಳನ್ನು ಹಿಂತಿರುಗಿಸಿರುತ್ತಾರೆ. ಈ ಪ್ರಕರಣವನ್ನು ಮುಂದುವರೆಸುವ ಅವಶ್ಯಕತೆ ಕಂಡುಬರುವುದಿಲ್ಲವಾದ್ದರಿಂದ ಮೇಲ್ಕಂಡ ಅಧಿಕಾರಿ ಹಾಗೂ ನೌಕರರ ಅಮಾನತ್ತು ಆದೇಶವನ್ನು ರದ್ದುಗೊಳಿಸಿ, ಸದರಿಯವರುಗಳ ವಿರುದ್ಧ ಉದ್ದೇಶಿಸಲಾಗಿರುವ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿದೆ. ಇದಲ್ಲದೇ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶದ ಹಿನ್ನಲೆಯಲ್ಲಿ ವಿಷಯವನ್ನು ಪುನರ್ ಪರಿಶೀಲಿಸಿದ್ದುದರಿಂದ ಸದರೀ ಪ್ರಕರಣದಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 34 ಎಡಿಇ 2007, ಬೆಂಗಳೂರು, ದಿನಾಂಕ: 17ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವರದಿಯ ಮೇರೆಗೆ, ದೊಡ್ಡಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಬಸುವನಹಳ್ಳಿ ಗ್ರಾಮದ ಸರ್ವೆ ನಂ: 42ರಲ್ಲಿರುವ 2–20 ಎಕರೆ–ಗುಂಟೆ ಜಮೀನಿನ ಹರಾಜು ಬಾಬ್ತು ಅರ್ಜಿದಾರರಿಂದ ಪಾವತಿಸಿಕೊಂಡಿರುವ ರೂ.43.00 ಲಕ್ಷಗಳನ್ನು ಹಿಂತಿರುಗಿಸಲು ಸರ್ಕಾರದ ಅನುಮತಿ ನೀಡಿರುವುದರಿಂದ, ಅದರಂತೆ ಸದರಿ ಬಿಡ್ಡುದಾರರಾದ ಶ್ರೀ ರಾಮಯ್ಯರೆಡ್ಡಿ ಇವರಿಗೆ ರೂ.43.00 ಲಕ್ಷಗಳನ್ನು ಹಿಂತಿರುಗಿಸಿದೆ. ಆದುದರಿಂದ, ಈ ಪ್ರಕರಣದಲ್ಲಿ ಹಿಂದೆ ಸರ್ಕಾರದಿಂದ ಹೊರಡಿಸಲಾಗಿದ್ದ ದಿನಾಂಕ: 20–11–2007ರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ, ಈ ಪ್ರಕರಣವನ್ನು ಮುಂದುವರೆಸುವ ಅವಶ್ಯಕತೆ ಕಂಡುಬಂದಿಲ್ಲವಾದ್ದರಿಂದ, ಈ ಪ್ರಕರಣದಲ್ಲಿ ಭಾಗಿಯಾಗಿರುವ (1) ಶ್ರೀ ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್ ದೇವನಹಳ್ಳಿ ತಾಲ್ಲೂಕು, (2) ಶ್ರೀ ಸಿ.ನಾಗರಾಜ್, ರಾಜಸ್ವ ನಿರೀಕ್ಷಕರು, ಕಸಬಾ ಹೋಬಳಿ, ದೇವನಹಳ್ಳಿ ತಾಲ್ಲೂಕು ಮತ್ತು (3) ಶ್ರೀ ನರಸಿಂಹಮೂರ್ತಿ, ತಾಲ್ಲೂಕು ಸರ್ವೇಯರ್, ದೊಡ್ಡಬಳ್ಳಾಪುರ ತಾಲ್ಲೂಕು ಇವರುಗಳ ಅಮಾನತ್ತು ಆದೇಶವನ್ನು ರದ್ದುಗೊಳಿಸಿ, ಸದರಿಯವರುಗಳ ವಿರುದ್ಧ ಉದ್ದೇಶಿಸಲಾಗಿರುವ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.415

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ.ಜಿ. ಅಯ್ಯಪ್ಪ ರವರಿಗೆ ಡಿವೈ.ಎಸ್.ಪಿ. ಸಿವಿಲ್ ಹುದ್ದೆಗೆ ಬಡ್ತಿ ನೀಡಿರುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 91 ಪೊಸಿಪ 2000, ದಿನಾಂಕ 24–6–2002.
2. ಪೊಲೀಸ್ ಮಹಾನಿರ್ದೇಶಕರು ರವರ ಪತ್ರ ಸಂಖ್ಯೆ ಸಿಬಿ:4:70:03–04, ದಿನಾಂಕ 11–2–2004, 31–8–2004, 21–2–2005 ಮತ್ತು 27–11–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಬಿ.ಜಿ. ಅಯ್ಯಪ್ಪ, ಡಿವೈ.ಎಸ್.ಪಿ. (ಸಿವಿಲ್) ಹುದ್ದೆಯಲ್ಲಿ ಸೇವೆ ಕ್ರಮಬದ್ಧಗೊಳಿಸಿ ಕೆ.ಪಿ.ಟಿ.ಸಿ.ಎಲ್., ಡಿವೈ.ಎಸ್.ಪಿ., ಹುದ್ದೆಯಲ್ಲಿ ಮುಂದುವರೆಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಅಯ್ಯಪ್ಪ, ಡಿವೈ.ಎಸ್.ಪಿ. ರವರಿಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಎಸ್.ವಿ. ಶಶಿಧರ ರವರನ್ನು ಅವರು ಕರ್ತವ್ಯ ನಿರ್ವಹಿಸುತ್ತಿದ್ದ ಎ.ಸಿ.ಪಿ. ವಿ.ಐ.ಪಿ. ಸೆಕ್ಯೂರಿಟಿ, ಬೆಂಗಳೂರು ಹುದ್ದೆಯಲ್ಲಿ ಸೇವೆ ಕ್ರಮಬದ್ಧಗೊಳಿಸಿ ಮುಂದುವರೆಸಲಾಗಿತ್ತು. ಶ್ರೀ ಅಯ್ಯಪ್ಪ ರವರನ್ನು ಕೆ.ಪಿ.ಟಿ.ಸಿ.ಎಲ್.ನ ನಿಯೋಜನೆ ಹುದ್ದೆಯಲ್ಲಿ ಡಿವೈಎಸ್.ಪಿ.ಯಾಗಿ ಕ್ರಮಬದ್ಧಗೊಳಿಸಿ ಮುಂದುವರೆಸಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 60ರನ್ವಯ ಸೇವೆಯಲ್ಲಿ ಕಿರಿಯರಾದ ಶ್ರೀ ಎಸ್.ವಿ. ಶಶಿಧರ ರವರನ್ನು ಕ್ರಮಬದ್ಧಗೊಳಿಸಿ ದಿನಾಂಕದಿಂದಲೇ ವೇತನ ನಿಗಧಿಪಡಿಸುವ ಸಲುವಾಗಿ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 92 ಪೊಸಿಪ 2004, ಬೆಂಗಳೂರು, ದಿನಾಂಕ: 3ನೇ ಜನವರಿ 2009**

ಶ್ರೀ ಬಿ.ಜಿ. ಅಯ್ಯಪ್ಪ, ಡಿವೈ.ಎಸ್.ಪಿ. (ಸಿವಿಲ್) ಹುದ್ದೆಗೆ ಪದೋನ್ನತಿ ನೀಡಿ ಪದ ವೃಂದವಿಲ್ಲದ (ಕೆ.ಪಿ.ಟಿ.ಸಿ.ಎಲ್. ಡಿವೈ.ಎಸ್.ಪಿ) ಹುದ್ದೆಗೆ ನೇಮಕ ಮಾಡಿರುವುದನ್ನು ಇವರಿಗಿಂತ ಸೇವೆಯಲ್ಲಿ ಕಿರಿಯದಾದ ಶ್ರೀ ಎಸ್.ವಿ. ಶಶಿಧರ ರವರಿಗೆ

ಡಿ.ವೈ.ಎಸ್.ಪಿ. ಹುದ್ದೆಯಲ್ಲಿ ಮುಂಬಡ್ತಿ ನೀಡಿದ ದಿನಾಂಕ 24–6–2002 ರಿಂದ ಜಾರಿಗೆ ಬರುವಂತೆ, ಕೆ.ಸಿ.ಎಸ್.ಆರ್. ನಿಯಮ 60ರಡಿಯಲ್ಲಿ ನಿರ್ದರ್ಶನಾತ್ಮಕ ಸ್ಥಾನಪನ್ನ ಪದೋನ್ನತಿ (proforma) ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 289

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## HORTICULTURE SECRETARIAT

**Sub :** Constitution of State Level Technical Screening Committee under National Mission on Medicinal Plants.

**Read :** 1. GO letter No. 18020/32/2008-NMPB dated 17-10-2008.
2. Director of Horticulture letter No. ತೋಇ/ಜಂನಿ/ಜೀವತಾ/ತಾಸ/25/2008–09, dated: 18-12-2008.

**Preamble:**

Government of India has launched a New Centrally Sponsored Scheme of National Mission on Medicinal Plants. The Operational Guidelines has been circulated to the participating States vide Government of India letter read at (1) above.

The Director of Horticulture has proposed to constitute a State Level Technical Screening Committee for providing technical guidance in implemenation of National Mission on Medicinal Plants in the State as per his letter read at (2) above.

Hence, this Order.

**Government Order No. AHD 174 HPP 2008, Bangalore, Dated 2nd January 2009**

Government is pleased to constitute the State Level Technical Screening Committee to provide technical guidance in implementation of National Mission on Medicinal Plants programme in Karnataka State as below:

| | | |
|---|---|---|
| 1 | Secretary, Horticulture Department | Chairman |
| 2 | Principal Chief Conservator of Forests | Member |
| 3 | Chief Executive Officer, State Medical Plant Authority, Bangalore | Member |
| 4 | Dr. Vasundhara, Professor, Horticulture Division, G.K.V.K. University of Agricultural Science, Bangalore | Member |
| 5 | Representative from Himalaya Drug Company, Bangalore | Member |
| 6 | Director of Horticulture, Lalbagh, Bangalore | Member-Secretary |

This Order comes into immediate effect.

By order and in the name of the Governor of Karnataka,

PR. 261

**A.A. CHAPPARBAND**

Desk Officer, Horticulture Department.

## ಕಂದಾಯ ಸಚಿವಾಲಯ

**ವಿಷಯ :** ಶ್ರೀರಾಂಪುರಂ ಉಪ ನೋಂದಣಿ ಕಛೇರಿ ಕಾರ್ಯ ನಡೆಸಲು ಖಾಸಗಿ ಕಟ್ಟಡದ ಬಾಡಿಗೆಯನ್ನು ನಿಗಧಿಪಡಿಸುವ ಕುರಿತು.

**ಓದಲಾಗಿದೆ :** ನೋಂದಣಿ ಮಹಾ ಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ 36/2007–08, ದಿನಾಂಕ 1–8–2008.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 1–8–2008ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಸರ್ಕಾರವು ಅಧಿಕ ಕೆಲಸದ ಒತ್ತಡವಿರುವ ಉಪ ನೋಂದಣಿ ಕಛೇರಿಗಳನ್ನು ವಿಭಜಿಸಿ ಆದೇಶಿಸಿದ್ದು, ಶ್ರೀರಾಂಪುರಂ ಉಪ ನೋಂದಣಿ ಕಛೇರಿ ಕಾರ್ಯ ನಿರ್ವಹಿಸಲು ಶ್ರೀ ಬಿ.ಸಿ. ನಾರಾಯಣ್, ನಂ. 46, ಮಾಗಡಿ ಮುಖ್ಯರಸ್ತೆ, ಬೆಂಗಳೂರು ಇವರ ಒಡೆತನದ ಖಾಸಗಿ ಕಟ್ಟಡವು ಕಛೇರಿ ಕಾರ್ಯನಿರ್ವಹಿಸಲು ಸೂಕ್ತವಾಗಿರುವುದಾಗಿ ಜಿಲ್ಲಾ ನೋಂದಣಾಧಿಕಾರಿಗಳು, ರಾಜಾಜಿನಗರ ನೋಂದಣಿ ಜಿಲ್ಲೆ, ಬೆಂಗಳೂರು ಇವರು ಶಿಫಾರಸ್ಸು ಮಾಡಿದ್ದು, ಇದಕ್ಕೆ ಸಂಬಂಧಿಸಿದಂತೆ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬೆಂಗಳೂರು ಇವರು ಸದರಿ ಕಟ್ಟಡಕ್ಕೆ ಚ.ಅಡಿಗೆ ರೂ. 16.85 ರಂತೆ 2500 ಅಡಿಗಳಿಗೆ ರೂ. 42.125 ಬಾಡಿಗೆ ನಿಗಧಿಪಡಿಸಿ, ಬಾಡಿಗೆ ದೃಢೀಕರಣ ಪತ್ರ ನೀಡಿರುತ್ತಾರೆ. ಸರ್ಕಾರಿ ಆದೇಶದ ರೀತ್ಯಾ ದಿನಾಂಕ 1–3–2008 ರಿಂದ ಹೊಸ ಕಛೇರಿಯು ಕಾರ್ಯಾರಂಭಗೊಂಡಿದ್ದು, ಮಾಹೆಯಾನ ರೂ. 42,125/– ಬಾಡಿಗೆಯನ್ನು ದಿನಾಂಕ 1–3–2008 ರಿಂದ ಜಾರಿಗೆ ಬರುವಂತೆ ಆದೇಶ

ಹೊರಡಿಸಬೇಕೆಂದು ಹಾಗೂ ಸದರಿ ಹೆಚ್ಚುವರಿ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "2030-03-001–071"ರ ಅಡಿಯಲ್ಲಿ ಈಗಾಗಲೇ ಇತರೆ ಕಟ್ಟಡಗಳಿಗೆ ಭರಿಸುವ ರೀತ್ಯಾ ವೆಚ್ಚ ಭರಿಸಬೇಕಾಗಿದ್ದು, ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 275 ಮುನೋಮು 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008**

ಶ್ರೀರಾಂಪುರಂ ಉಪ ನೋಂದಣಿ ಕಛೇರಿಯ ಕಾರ್ಯವನ್ನು ಶ್ರೀ ಬಿ.ಸಿ. ನಾರಾಯಣ್, ನಂ. 46, ಮಾಗಡಿ ಮುಖ್ಯರಸ್ತೆ, ಬೆಂಗಳೂರು ಇವರ ಒಡೆತನದ ನಂ. 46, 2ನೇ ಮಹಡಿ, ಮಾಗಡಿ ಮುಖ್ಯರಸ್ತೆ, ಅಂಜನ್ ಚಿತ್ರಮಂದಿರದ ಪಕ್ಕ, ಬೆಂಗಳೂರು–560023 ಇಲ್ಲಿನ ಖಾಸಗಿ ಕಟ್ಟಡದಲ್ಲಿ ನಿರ್ವಹಿಸಲಾಗುತ್ತಿದ್ದು, ಸದರಿ ಕಟ್ಟಡದ 2500 ಚದರ ಅಡಿಗಳಿಗೆ ಲೋಕೋಪಯೋಗಿ ಇಲಾಖೆಯು ನಿಗದಿಪಡಿಸಿರುವಂತೆ ಮಾಸಿಕ ಬಾಡಿಗೆ ರೂ. 42,125/–ಗಳನ್ನು (ನಲವತ್ತೆರಡು ಸಾವಿರದ ನೂರಾ ಇಪ್ಪತ್ತೈದು ರೂಪಾಯಿಗಳು ಮಾತ್ರ) ನೀಡಲು ಸರ್ಕಾರವು ಅನುಮತಿ ನೀಡಿದೆ.

ಈ ವೆಚ್ಚವನ್ನು 'ಲೆಕ್ಕ ಶೀರ್ಷಿಕೆ 2030–03–001–071' ರಲ್ಲಿ ಭರಿಸಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಕಂಇ 63815 ಆಂಆಸ 08, ದಿನಾಂಕ 27–11–2008ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ 10–7–1996 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 160

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ನೋಂದಣಿ & ಮುದ್ರಾಂಕ)

**ವಿಷಯ :** ಶ್ರೀ ಪಿ.ಎಂ. ಮರುಳಸಿದ್ದಪ್ಪ, ನಿವೃತ್ತ ತಹಶೀಲ್ದಾರ್ ಇವರಿಗೆ ವಿಳಂಬವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಶ್ರೀ ಪಿ.ಎಂ. ಮರುಳಸಿದ್ದಪ್ಪ, ನಿವೃತ್ತ ತಹಶೀಲ್ದಾರ್, ಮೈಸೂರು ಇವರ ಮನವಿ ದಿನಾಂಕ 21–7–2008.
2. ಮಹಾಲೇಖಪಾಲರ ಪತ್ರ ಸಂ: GE-1/R-5/Vol-519/151-52, Dt: 21-5-2008.
3. ಮಹಾಲೇಖಪಾಲರ ಪತ್ರ ಸಂ: PVI/R-5/R-51299/07-08/526, Dt: 16-7-2007.
4. ಸರ್ಕಾರದ ಆದೇಶ ಸಂ: ಆಇ(ವಿ)1:ಪಿಎನ್:03, ಬೆಂಗಳೂರು, ದಿನಾಂಕ 21–8–2003.

**ಪ್ರಸ್ತಾವನೆ :**

ಶ್ರೀ ಪಿ.ಎಂ. ಮರುಳಸಿದ್ದಪ್ಪ, ನಿವೃತ್ತ ತಹಶೀಲ್ದಾರ್ ಇವರು ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, ತಾವು ದಿನಾಂಕ 31–5–2004ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದ್ದು, ತಮಗೆ ವಿಳಂಬವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಸದರಿಯವರಿಗೆ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ ಕ್ರ.ಸಂ: (2) ಮತ್ತು (3)ರಲ್ಲಿ ಓದಲಾದ ಪತ್ರಗಳಲ್ಲಿ ಮಹಾಲೇಖಪಾಲರು ಮಾಹಿತಿಯನ್ನು ನೀಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಆದೇಶ ಸಂ: ಆಇ (ವಿಶೇಷ) 199 ಪಿಇಎನ್ 93, ದಿನಾಂಕ 13–9–94 ಹಾಗೂ ಉಲ್ಲೇಖ (4), ದಿನಾಂಕ 21–8–2003ರನ್ವಯ ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಪಿ.ಎಂ. ಮರುಳಸಿದ್ದಪ್ಪ, ನಿವೃತ್ತ ತಹಶೀಲ್ದಾರ್ ಇವರಿಗೆ ವಿಳಂಬವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ನೀಡುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 411 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಶ್ರೀ ಪಿ.ಎಂ. ಮರುಳಸಿದ್ದಪ್ಪ, ನಿವೃತ್ತ ತಹಶೀಲ್ದಾರ್ ಇವರಿಗೆ ವಿಳಂಬವಾಗಿ ಪಾವತಿಸಲ್ಪಟ್ಟ ನಿವೃತ್ತಿ ಸೌಲಭ್ಯಗಳಿಗೆ ಈ ಕೆಳಕಂಡಂತೆ ಬಡ್ಡಿಯನ್ನು ಮಂಜೂರು ಮಾಡಿದೆ.

| | | |
|---|---|---|
| 1) | ಡಿ.ಸಿ.ಆರ್.ಜಿ. ಮೊತ್ತ<br>ರೂ. 10,000 – ದಿನಾಂಕ 1–9–2004 ರಿಂದ 31–5–2008ರವರೆಗೆ<br>ಶೇಕಡ 8ರಂತೆ ಬಡ್ಡಿ | ರೂ. 2,267–00 |
| 2) | ಗಳಿಕೆ ರಜೆ ನಗಧೀಕರಣ ಮೊತ್ತ<br>ರೂ. 1,48,376 – ದಿನಾಂಕ 1–9–2004 ರಿಂದ 31–7–2008ರವರೆಗೆ<br>ಶೇಕಡ 8ರಂತೆ ಬಡ್ಡಿ | ರೂ. 44,513–00 |
| | | **ರೂ. 46,780–00** |

(ಒಟ್ಟು ನಲವತ್ತಾರು ಸಾವಿರದ ಏಳುನೂರ ಎಂಬತ್ತು ರೂಪಾಯಿಗಳು ಮಾತ್ರ)

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ (ವಿ.321 ಪಿಇಎನ್–1/08, ದಿನಾಂಕ 10–12–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ).

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 650

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)